ಚಲನ್/ರಸೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ ನ್ಯಾಯಾಲಯದಲ್ಲಿರುವ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:14–7–2006ರಂದು ನೀಡಿರುವ ತೀರ್ಪಿಗೆ ಮುನ್ನಾ ನೋಟೀಸ್‌ನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ 21–11–2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು, ಈ ಕೆಳಗೆ ಷೆಡ್ಯೂಲ್ ನಲ್ಲಿ ವಿವರಿಸಿರುವಂತೆ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನಾ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ–1/ಡಿಐಎಸ್/75/2006–07 ದಿನಾಂಕ:14–7–2006ನ್ನು ಈ ಮೂಲಕ ಸ್ಥಿರೀಕರಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

1. ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಪೀಣ್ಯ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಖಾತಾ ಸಂಖ್ಯೆ 284 ಆಗಿರುವ ನಿವೇಶನ ಸಂಖ್ಯೆ 413 ಹಾಗೂ ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ

ಪೂರ್ವಕ್ಕೆ : ನಿವೇಶನ
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಶ್ರೀಲಿಂಗಯ್ಯನವರ ಮನೆ
ದಕ್ಷಿಣಕ್ಕೆ : ಶ್ರೀರಾಮರವರಿಗೆ ಸೇರಿದ ಮನೆ

2. ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಪೀಣ್ಯ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಖಾತಾ ಸಂಖ್ಯೆ:284 ಆಗಿರುವ ಪೂರ್ವದಿಂದ ಪಶ್ಚಿಮಕ್ಕೆ 42 ಅಡಿ ಮತ್ತು ಉತ್ತರದಿಂದ ದಕ್ಷಿಣಕ್ಕೆ 14 ಅಡಿ ಅಳತೆಯ ನಿವೇಶನ ಸಂಖ್ಯೆ:414 ಹಾಗೂ ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ ಮತ್ತು ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ

ಪೂರ್ವಕ್ಕೆ : ನಿವೇಶನ
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಶ್ರೀಮೈಲಾರಿಯವರ ಮನೆ
ದಕ್ಷಿಣಕ್ಕೆ : ಶ್ರೀಮುನಿಚಿಕ್ಕಣ್ಣನವರ ಸೇರಿದ ಮನೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:18–5–2007ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಪಿ.ಆರ್. 929
ಸಹಕಾರ ಸಂಘಗಳ ಉಪನಿಬಂಧಕರು–1
ಬೆಂಗಳೂರು ನಗರ ಜಿಲ್ಲೆ

**ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರ ನ್ಯಾಯಾಲಯದಲ್ಲಿ**
**ನಂ. 146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**
**ದಾವಾ ಅರ್ಜಿ ಸಂಖ್ಯೆ:ಡಿಆರ್‌ಬಿ–1/ಡಿಸ್/174/2006–07**

**ವಾದಿ:**
ನಿರ್ದೇಶಕರು,
ದಿ ಮಹಾಲಕ್ಷ್ಮಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್, ನಂ. 664, 'ಆಶೀರ್ವಾದ್' 4ನೇ ಕ್ರಾಸ್, ಮಹಾಲಕ್ಷ್ಮಿ ಬಡಾವಣೆ ಬೆಂಗಳೂರು–560 086

**ಪ್ರತಿವಾದಿ :**
1. ಶ್ರೀ ಆನಂದ್ ಪಿ. ಗೋಗಿ ಬಿನ್ ಪ್ರಹ್ಲಾದ್ ಪಿ ಗೋಗಿ ನಂ. 36, ಅನ್ನಪೂರ್ಣೇಶ್ವರಿ ದೇವಸ್ಥಾನದ ಎದುರು, ಕೋಣನಕುಂಟೆ, ಬೆಂಗಳೂರು–62
2. ಶ್ರೀಮತಿ ವಸುಮತಿ ಎಂ.ಎಸ್. ಕೋಂ ಆನಂದ್ ಪಿ. ಗೋಗಿ ನಂ. 36 ಅನ್ನಪೂರ್ಣೇಶ್ವರಿ ದೇವಸ್ಥಾನದ ಎದುರು, ಕೋಣನಕುಂಟೆ, ಬೆಂಗಳೂರು–62.

ವಾದಿಯವರು ಪ್ರತಿವಾದಿಗಳ ವಿರುದ್ಧ ರೂ. 27,15,109/–ಗಳನ್ನು ಶೇಕಡ 18% ರಂತೆ ಬಡ್ಡಿ ಮತ್ತು ಶೇಕಡ 2% ರಂತೆ ಸುಸ್ತಿಬಡ್ಡಿ ವಸೂಲಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾವೆ ಹೂಡಿ ಜೊತೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲು ಅಥವಾ ಪರಭಾರೆ ಮಾಡಲು ಉದ್ದೇಶಿಸಿರುವುದಾಗಿ ನ್ಯಾಯಾಲಯದಲ್ಲಿ ಗಮನಕ್ಕೆ ತಂದ ಮೇಲೆ ಈ ನ್ಯಾಯಾಲಯವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಹೊರಡಿಸಲಾದ ದಿನಾಂಕ:31–12–2006ರ ನೋಟೀಸ್‌ನಲ್ಲಿ ಪ್ರತಿವಾದಿಗಳು ಒಂದು ವೇಳೆ ತೀರ್ಪಿಗೆ ಮುನ್ನಾ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 27.15.109/–ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:22–1–2007ರೊಳಗಾಗಿ ಅಧಿಕೃತ ಚಲನ್ ಅಥವಾ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿತ್ತು.

ಆದರೆ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:31–12–2006ರ ಆದೇಶದಲ್ಲಿ ನೀಡಿರುವ ಸೂಚನೆಯ ರೀತ್ಯಾ ರೂ. 27,15,109/–ಗಳನ್ನು ಈ ದಿನಾಂಕದವರೆವಿಗೂ ಸಂಘದಲ್ಲಿನ ಅಮಾನತ್ ಖಾತೆಗೆ ಜಮಾ ಮಾಡಿ ಚಲನ್/ರಸೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ ನ್ಯಾಯಾಲಯದಲ್ಲಿರುವ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:31–12–2006ರಂದು ನೀಡಿರುವ ತೀರ್ಪಿಗೆ ಮುನ್ನಾ ನೋಟೀಸ್‌ನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಕ್ರಮಾಂಕ:ಸಿಎಂಡಬ್ಲ್ಯೂ69/ಸಿಎಲ್ಎಂ/2001 ದಿನಾಂಕ 21–11–2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಆದ ನಾನು, ಈ ಕೆಳಗೆ ಷೆಡ್ಯೂಲ್ ನಲ್ಲಿ ವಿವರಿಸಿರುವಂತೆ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನಾ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ–1/ಡಿಐಎಸ್/174/2006–07 ದಿನಾಂಕ:31–12–2006ನ್ನು ಈ ಮೂಲಕ ಸ್ಥಿರೀಕರಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ ಕೋಣನಕುಂಟೆ ಗ್ರಾಮದಲ್ಲಿರುವ ಖಾತೆ ಸಂಖ್ಯೆ 304 ಆಗಿರುವ ನಿವೇಶನ ಸಂಖ್ಯೆ:36, ಅಳತೆ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ ಹಾಗೂ ಉತ್ತರದಿಂದ ದಕ್ಷಿಣಕ್ಕೆ 31 ಅಡಿ ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಆಸ್ತಿಸಂಖ್ಯೆ 21
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಆಸ್ತಿ ಸಂಖ್ಯೆ 35
ದಕ್ಷಿಣಕ್ಕೆ : ಆಸ್ತಿ ಸಂಖ್ಯೆ 37

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:1–6–2007ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು–1
ಬೆಂಗಳೂರು ನಗರ ಜಿಲ್ಲೆ

ಪಿ.ಆರ್. 928

**ಕೃಷಿ ನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿ, ಬೆಂಗಳೂರು ಇವರ ನಡಾವಳಿ:**

**ವಿಷಯ :** ಶ್ರೀ ಪುರುಷೋತ್ತಮ ಎನ್. ಪಾಟೀಲ್, ಹಿಂದಿನ ಕೃಷಿ ಸಹಾಯಕ, ನಂದೂರು (ಬಿ ವೃತ್ತ) ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಲ್ಬರ್ಗಾ ತಾಲ್ಲೂಕು ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇವರ ವಿರುದ್ದ ನ್ಯಾಯಾಲಯದ ಪ್ರಕರಣದ ಬಗ್ಗೆ ಶಿಸ್ತು ಕ್ರಮ.

**ಉಲ್ಲೇಖ :** 1) ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ ವಿಭಾಗ ಇವರ ಕಛೇರಿ ಆದೇಶ ಸಂಖ್ಯೆ : ಆಡಳಿತ /ವಿಚಾರಣೆ/92–93/5653, ದಿನಾಂಕ:14–9–92.

2) ಸರ್ಕಾರದ ಪತ್ರ ಸಂಖ್ಯೆ: ಕೃತೋಇ:13:ಕೃಇವಿ:93, ದಿನಾಂಕ:19–5–94.

3) ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾವಿಭಾಗ ಇವರ ಕಛೇರಿ ಆದೇಶ ಸಂಖ್ಯೆ: ಆಡಳಿತ/ವಿಚಾರಣೆ/64/94–95/1118, ದಿನಾಂಕ:1–6–94.

4) ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಆಇ/ಆಡಳಿತ:3/ವಿನಿ/12/02/2007-2008 ದಿನಾಂಕ:26.4.2007.

5) ಸರ್ಕಾರದ ಪತ್ರ ಸಂಖ್ಯೆ:ಕೃತೋಇ 52 ಕೃವರಿ 2007, ದಿನಾಂಕ:8-5-2007.

6) ಇಲಾಖಾ ನಿಲಂಬನಾ ಆದೇಶಸಂಖ್ಯೆ: ಇಎಸ್‌ಟಿ 1/ಐಎನ್‌ಕ್ಯೂ 1/22/92-93 ದಿನಾಂಕ: 16-5-2007

7) ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 9 ಸೇಇವಿ 95, ದಿನಾಂಕ:26-6-96.

**ಪ್ರಸ್ತಾವನೆ:**

ಶ್ರೀ ಪುರುಷೋತ್ತಮ ಎನ್. ಪಾಟೀಲ್, ಹಿಂದಿನ ಕೃಷಿ ಸಹಾಯಕ, ನಂದೂರು (ಬಿ ವೃತ್ತ) ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗುಲ್ಬರ್ಗಾ ತಾಲ್ಲೂಕು ಇವರು ಈ ಹಿಂದೆ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಇವರ ವಿರುದ್ಧ ಗುನ್ಹೆ ದಾಖಲಾದ ಪ್ರಯುಕ್ತ ಸದರಿ ನೌಕರರನ್ನು ಅಂದಿನ ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ ಇವರು ಉಲ್ಲೇಖ (1) ರ ಆದೇಶದಲ್ಲಿ ದಿನಾಂಕ:20-7-1992ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿರುತ್ತಾರೆ, ನಂತರ ಸರ್ಕಾರದ ಉಲ್ಲೇಖ (2) ರ ಪತ್ರದಲ್ಲಿ ನ್ಯಾಯಾಲಯದ ತೀರ್ಪು ಬರಲು ವಿಳಂಬವಾಗುವುದರಿಂದ ನ್ಯಾಯಾಲಯದ ತನಿಖೆ ಬಾಕಿ ಇಟ್ಟು ಸದರಿ ನೌಕರರನ್ನು ನಿಲಂಬನೆಯಿಂದ ವಿಂಗಡನೆಗೊಳಿಸಲು ಹಾಗೂ ಮರು ನೇಮಕಾತಿ ಮಾಡಲು ನಿರ್ದೇಶಿಸಿದ ಹಿನ್ನಲೆಯಲ್ಲಿ ಉಲ್ಲೇಖ (3)ರ ಕಛೇರಿ ಆದೇಶದಲ್ಲಿ ಸದರಿಯವರನ್ನು ನಿಲಂಬನೆಯಿಂದ ವಿಮುಕ್ತಿಗೊಳಿಸಿ ಕೃಷಿ ಅಧಿಕಾರಿ, ಭೂಸಾರ ಸಂರಕ್ಷಣೆ ಉಪವಿಭಾಗ ಅಫ್ಜಲಪುರ ಕಛೇರಿಗೆ ನೇಮಿಸಿ ಆದೇಶ ಹೊರಡಿಸಿರುತ್ತಾರೆ. ಸದರಿಯವರ ವಿರುದ್ಧ ದಾಖಲಾದ ಸೆಷನ್ಸ್ ಕೇಸ್ ಸಂಖ್ಯೆ 105/92 ಹೆಚ್ಚುವರಿ ಸತ್ರ ನ್ಯಾಯಾಲಯ ಗುಲ್ಬರ್ಗಾದಲ್ಲಿ ವಿಚಾರಣೆಯನ್ನು ಕೈಗೊಂಡಿದ್ದು ತೀರ್ಪು ದಿನಾಂಕ:24-10-2005 ರಂದು ಹೊರಬಂದಿದೆ. ಈ ಆದೇಶ ಉಲ್ಲೇಖ (4) ಹಾಗೂ (5) ರ ಪತ್ರಗಳ ಮುಖೇನ ಇಲಾಖೆಗೆ ಮಾಹಿತಿ ಬಂದಿರುತ್ತದೆ. ಈ ನ್ಯಾಯಾಲಯದ ಆದೇಶದಲ್ಲಿ ಕ್ರಮ ಸಂಖ್ಯೆ 4ರಲ್ಲಿ ನಮೂದಿಸಿದ ಶ್ರೀ ಪುರುಷೋತ್ತಮ್ ಎನ್. ಪಾಟೀಲ್, ತಂದೆ ನವಲೋಜಿರಾವ್ ಪಾಟೀಲ್ ಇವರು ಕೃಷಿ ಇಲಾಖೆಗೆ ಸಂಬಂಧಿಸಿದವರಾಗಿದ್ದು ಇವರಿಗೆ ಕಠಿಣ ಕಾರಾಗೃಹದ ದಂಡನೆಯನ್ನು ವಿಧಿಸಿದೆ. ಉಲ್ಲೇಖ (4)ರ ಪತ್ರದಲ್ಲಿ ಸದರಿಯವರು ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು ಮಾತೃಇಲಾಖೆ ಹಾಗೂ ನೇಮಕಾತಿ ಪ್ರಾಧಿಕಾರ ಕೃಷಿ ಇಲಾಖೆ ಆಗಿರುವುದರಿಂದ ಕ್ರಮ ತೆಗೆದುಕೊಳ್ಳಲು ತಿಳಿಸಿರುತ್ತಾರೆ. ಸದರಿಯವರು ಮೇಲ್ಮನವಿ ಸಲ್ಲಿಸಿದ ಬಗ್ಗೆ ಮತ್ತು ಅಲ್ಲಿ ಪ್ರಕರಣವು ಇತ್ಯರ್ಥವಾಗಿದ್ದರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸುವ ಅವಶ್ಯಕತೆ ಕಂಡುಬಂದಿದ್ದರಿಂದ ಮತ್ತು ಕಾಲಾವಕಾಶ ಬೇಕಾಗಿದ್ದುದರಿಂದ, ಅಲ್ಲದೆ ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷ ಸಿಧಿಯಾಗಿದ್ದರಿಂದ ಸದರಿ ನೌಕರರನ್ನು ಮೊದಲು ಕರ್ತವ್ಯದಿಂದ ಹೊರಗಿಡಲು ಉಲ್ಲೇಖ (6) ರ ಅನ್ವಯ ಆರೋಪಿತರನ್ನು ನಿಲಂಬನೆಯಲ್ಲಿಟ್ಟು ಆದೇಶಿಸಿದೆ ನಂತರ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಲಾಗಿ ಮತ್ತು ನೌಕರರೇ ತಮ್ಮ ಅರ್ಜಿ ದಿನಾಂಕ :15-5-2007ರಲ್ಲಿ ಈ ಆದೇಶದ ವಿರುದ್ಧ ಸದರಿ ನೌಕರರು ಘನ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ಘನ ಕರ್ನಾಟಕ ಉಚ್ಚನ್ಯಾಯಾಲಯವು ಸದರಿಯವರ ಮೇಲೆ ವಿಧಿಸಿದ ದಂಡನೆಯನ್ನು ಕ್ರಿಮಿನಲ್ ಅಪೀಲುಸಂಖ್ಯೆ 2065/2005ರಲ್ಲಿ ದಿನಾಂಕ:16-11-2005ರಲ್ಲಿ ಅಮಾನತ್ತಿನಲ್ಲಿಟ್ಟು ನೌಕರರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತಾರೆ. ಸದರಿ ಪ್ರಕರಣವು ಉಚ್ಚನ್ಯಾಯಾಲಯದಲ್ಲಿ ವಿಚಾರಣೆಗೆ ಬಾಕಿ ಇರುತ್ತದೆ. ದೋಷಸಿದ್ಧಿಯಾದ ನೌಕರನು ಇತರ ನ್ಯಾಯಾಲಯಗಳಲ್ಲಿ ಮೇಲ್ಮನವಿ ಸಲ್ಲಿಸಿದ್ದಾಗ್ಯೂ ಅಥವಾ ಕ್ರಿಮಿನಲ್ ನ್ಯಾಯಾಲಯದ ದಂಡನಾದೇಶವನ್ನು ನಿಲಂಬನೆಯಲ್ಲಿಟ್ಟಿದೆ. ಮತ್ತು ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾರೆ ಎಂಬ ಕಾರಣಕ್ಕೆ ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14 (1)ರ ಅಡಿಯಲ್ಲಿ ಶಿಸ್ತಿನ ಕ್ರಮ, ಕೈಗೊಳ್ಳತಕ್ಕದ್ದು ಎಂಬುದಾಗಿ ಉಲ್ಲೇಖ (7) ರ ಸರ್ಕಾರದ ಸುತ್ತೋಲೆ ಸಂಖ್ಯೆ :ಸಿಆಸುಇ 9 ಸೇಇವಿ 95, ದಿನಾಂಕ:26-6-96ರಲ್ಲಿ ತಿಳಿಸಿದೆ. ಅಂತೆಯೇ ದೋಷಸಿದ್ಧಿಯಾದ ನೌಕರರನ್ನು ಇಲಾಖಾ ವಿಚಾರಣೆಗೆ ಒಳಪಡಿಸದೆ ಇವರ ವಿರುದ್ಧ ಕ್ರಮ ತೆಗೆದುಕೊಳ್ಳಬಹುದಾಗಿರುತ್ತದೆ. ಈ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಕಛೇರಿ ಆದೇಶ ಸಂಖ್ಯೆ:ಇಎಸ್‌ಟಿ-1/ಐಎನ್‌ಕ್ಯೂ-1/22/92-93, ದಿನಾಂಕ:2ನೇ ಜುಲೈ 2007**

ಈ ಕೆಳಗೆ ಸಹಿ ಮಾಡಿರುವ ಡಾ: ಎಂ. ಮಲ್ಲಪ್ಪ, ಕೃಷಿ ನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಮೇಲಿನ ಪ್ರಕರಣದ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಪುರುಷೋತ್ತಮ ಎನ್. ಪಾಟೀಲ್, ಕೃಷಿ ಸಹಾಯಕ (ನಿಲಂಬನೆಯಲ್ಲಿರುವ) ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 (1) ಅಡಿಯಲ್ಲಿ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 9 ಸೇಇವಿ 95, ದಿನಾಂಕ:26-6-96ರನ್ವಯ ತಕ್ಷಣದಿಂದ

ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ. ಸದರಿಯವರ ನಿಲಂಬನಾ ಅವಧಿಯನ್ನು ನಿಲಂಬನಾ ಅವಧಿಯೆಂದೆ ಪರಿಗಣಿಸಿ ಆದೇಶಿಸಿರುತ್ತೇನೆ.

ಕೃಷಿ ನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಗಳು

ಪಿ.ಆರ್. 923

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರ ನ್ಯಾಯಾಲಯದಲ್ಲಿ**
**ನಂ. 146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03**
**ದಾವಾ ಅರ್ಜಿ ಸಂಖ್ಯೆ:ಡಿಆರ್‌ಬಿ-1/ಡಿಸ್/77/2006-07**

**ವಾದಿ:**
ದಿ ಮಹಾಲಕ್ಷ್ಮಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ನಂ. 664, 'ಆಶೀರ್ವಾದ್' 4ನೇ ಕ್ರಾಸ್, ಮಹಾಲಕ್ಷ್ಮಿ ಬಡಾವಣೆ ಬೆಂಗಳೂರು-560 086

**ಪ್ರತಿವಾದಿ :**
1. ಶ್ರೀಮತಿ ಕುಮುದ ಎ. ಕೋಂ ಎಸ್. ಆರ್ಮುಗಂ ನಂ. 414, 4ನೇ ಬ್ಲಾಕ್ ಪೀಣ್ಯ ಮುಖ್ಯರಸ್ತೆ, ಬೆಂಗಳೂರು-58
2. ಶ್ರೀ ಎಸ್. ಆರ್ಮುಗಂ, ಬಿನ್ ಲೇಟ್ ಶಿವನ್ ನಂ. 414, 4ನೇ ಬ್ಲಾಕ್ ಪೀಣ್ಯ ಮುಖ್ಯರಸ್ತೆ, ಬೆಂಗಳೂರು-58

ವಾದಿಯವರು ಪ್ರತಿವಾದಿಗಳ ವಿರುದ್ಧ ರೂ. 9,90,250/-ಗಳನ್ನು ಶೇಕಡ 16% ರಂತೆ ಬಡ್ಡಿ ಮತ್ತು ಶೇಕಡ 2% ರಂತೆ ಸುಸ್ತಿಬಡ್ಡಿ ವಸೂಲಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾವೆ ಹೂಡಿ ಜೊತೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲು ಅಥವಾ ಪರಭಾರೆ ಮಾಡಲು ಉದ್ದೇಶಿಸಿರುವುದಾಗಿ ನ್ಯಾಯಾಲಯದಲ್ಲಿ ಗಮನಕ್ಕೆ ತಂದ ಮೇಲೆ ಈ ನ್ಯಾಯಾಲಯವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಹೊರಡಿಸಲಾದ ದಿನಾಂಕ:14-7-2006ರ ನೋಟೀಸ್‌ನಲ್ಲಿ ಪ್ರತಿವಾದಿಗಳು ಒಂದು ವೇಳೆ ತೀರ್ಪಿಗೆ ಮುನ್ನಾ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 9,90,250/-ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:28-7-2006ರೊಳಗಾಗಿ ಅಧಿಕೃತ ಚಲನ್ ಅಥವಾ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿತ್ತು.

ಆದರೆ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:14-7-2006ರ ಆದೇಶದಲ್ಲಿ ನೀಡಿರುವ ಸೂಚನೆಯ ರೀತ್ಯಾ ರೂ. 9,90,250/-ಗಳನ್ನು ಈ ದಿನಾಂಕದವರೆವಿಗೂ ಸಂಘದಲ್ಲಿನ ಅಮಾನತ್ ಖಾತೆಗೆ ಜಮಾ ಮಾಡಿ ಚಲನ್/ರಸೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ ನ್ಯಾಯಾಲಯದಲ್ಲಿರುವ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:14-7-2006ರಂದು ನೀಡಿರುವ ತೀರ್ಪಿಗೆ ಮುನ್ನಾ ನೋಟೀಸ್‌ನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ 21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಆದ ನಾನು, ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನಾ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ-1/ಡಿಐಎಸ್/77/2006-07 ದಿನಾಂಕ:14-7-2006ನ್ನು ಈ ಮೂಲಕ ಸ್ಥಿರೀಕರಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

1. ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಪೀಣ್ಯ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಖಾತಾ ಸಂಖ್ಯೆ 284 ಆಗಿರುವ ನಿವೇಶನ ಸಂಖ್ಯೆ 413 ಹಾಗೂ ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ

ಪೂರ್ವಕ್ಕೆ : ನಿವೇಶನ
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಶ್ರೀಲಿಂಗಯ್ಯನವರ ಮನೆ
ದಕ್ಷಿಣಕ್ಕೆ : ಶ್ರೀರಾಮರವರಿಗೆ ಸೇರಿದ ಮನೆ

2. ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಪೀಣ್ಯ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಖಾತಾ ಸಂಖ್ಯೆ:284 ಆಗಿರುವ ಪೂರ್ವದಿಂದ ಪಶ್ಚಿಮಕ್ಕೆ 42 ಅಡಿ ಮತ್ತು ಉತ್ತರದಿಂದ ದಕ್ಷಿಣಕ್ಕೆ 14 ಅಡಿ ಅಳತೆಯ ನಿವೇಶನ ಸಂಖ್ಯೆ:414 ಹಾಗೂ ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ ಮತ್ತು ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ

ಪೂರ್ವಕ್ಕೆ : ನಿವೇಶನ
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಶ್ರೀಮೈಲಾರಿಯವರ ಮನೆ
ದಕ್ಷಿಣಕ್ಕೆ : ಶ್ರೀಮುನಿಚಿಕ್ಕಣ್ಣನವರ ಸೇರಿದ ಮನೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: –5–2007ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು–1
ಬೆಂಗಳೂರು ನಗರ ಜಿಲ್ಲೆ

ಪಿ.ಆರ್. 926

**ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರ ನ್ಯಾಯಾಲಯದಲ್ಲಿ**
**ನಂ. 146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**
**ದಾವಾ ಅರ್ಜಿ ಸಂಖ್ಯೆ:ಡಿಆರ್‌ಬಿ–1/ಡಿಐಎಸ್/173/2006–07**

**ವಾದಿ:**
ನಿರ್ದೇಶಕರು
ದಿ ಮಹಾಲಕ್ಷ್ಮಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್, ನಂ. 664, 'ಆಶೀರ್ವಾದ್' 4ನೇ ಕ್ರಾಸ್, ಮಹಾಲಕ್ಷ್ಮಿ ಬಡಾವಣೆ ಬೆಂಗಳೂರು–560 086

**ಪ್ರತಿವಾದಿ :**
1. ಶ್ರೀ ಜಿ.ಎಂ. ಪುಟ್ಟಮಲ್ಲಪ್ಪ ಮೃತರಾಗಿರುತ್ತಾರೆ ಇವರ ವಾರಸುದಾರರು:
1)ಎ) ಶ್ರೀ ಸುರೇಶ್ ಎಂ.ಬಿ ಬಿನ್ ಲೇಟ್ ಎಂ.ಪಿ. ಬಸವರಾಜ್,
1)ಬಿ) ಶ್ರೀಮತಿ ಲೀಲಾವತಿ ಕೋಂ ಲೇಟ್ ಎಂ.ಪಿ. ಬಸವರಾಜ್
1)ಸಿ) ಶ್ರೀ ಸುನಿಲ್ ಎಂ.ಬಿ. ಬಿನ್ ಲೇಟ್ ಎಂ. ಪಿ. ಬಸವರಾಜ್
1)ಡಿ) ರಷ್ಮಿ ಎಂ.ಬಿ ಬಿನ್ ಲೇಟ್ ಎಂ.ಪಿ. ಬಸವರಾಜ್
ಮೇಲಿನ ಎಲ್ಲಾ ಪ್ರತಿವಾದಿಗಳ ವಿಳಾಸ:
ರೇಣುಕಾ ಕೃಪ
ನಂ. 751, 3ನೇ ಮುಖ್ಯರಸ್ತೆ, ರಾಜಾಜಿನಗರ,
ಬೆಂಗಳೂರು–560 010

ವಾದಿಯವರು ಪ್ರತಿವಾದಿಗಳ ವಿರುದ್ಧ ರೂ. 11,83,645/–ಗಳನ್ನು ಶೇಕಡ 18% ರಂತೆ ಬಡ್ಡಿ ಮತ್ತು ಶೇಕಡ 2% ರಂತೆ ಸುಸ್ತಿಬಡ್ಡಿ ವಸೂಲಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾವೆ ಹೂಡಿ ಜೊತೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲು ಅಥವಾ ಪರಭಾರೆ ಮಾಡಲು ಉದ್ದೇಶಿಸಿರುವುದಾಗಿ ನ್ಯಾಯಾಲಯದಲ್ಲಿ ಗಮನಕ್ಕೆ ತಂದ ಮೇಲೆ ಈ ನ್ಯಾಯಾಲಯವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಹೊರಡಿಸಲಾದ ದಿನಾಂಕ:31–12–2006ರ ನೋಟೀಸ್‌ನಲ್ಲಿ ಪ್ರತಿವಾದಿಗಳು ಒಂದು ವೇಳೆ ತೀರ್ಪಿಗೆ ಮುನ್ನಾ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 11,83,645/–ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:22–1–2007ರೊಳಗಾಗಿ ಅಧಿಕೃತ ಚಲನ್ ಅಥವಾ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿತ್ತು.

ಆದರೆ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:31–12–2006ರ ಆದೇಶದಲ್ಲಿ ನೀಡಿರುವ ಸೂಚನೆಯ ರೀತ್ಯಾ ರೂ. 11,83,645/–ಗಳನ್ನು ಈ ದಿನಾಂಕದವರೆವಿಗೂ ಸಂಘದಲ್ಲಿನ ಅಮಾನತ್ ಖಾತೆಗೆ ಜಮಾ ಮಾಡಿ ಚಲನ್/ರಸೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ ನ್ಯಾಯಾಲಯದಲ್ಲಿರುವ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:31–12–2006ರಂದು ನೀಡಿರುವ ತೀರ್ಪಿಗೆ ಮುನ್ನಾ ನೋಟೀಸ್‌ನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ 21–11–2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಆದ ನಾನು, ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನಾ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ–1/ಡಿಐಎಸ್/173/2006–07 ದಿನಾಂಕ:31–12–2006ನ್ನು ಈ ಮೂಲಕ ಸ್ಥಿರೀಕರಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

1. ಬೆಂಗಳೂರು ನಗರ (ವಾರ್ಡ್ ನಂ. 22) ರಾಜಾಜಿನಗರ 3ನೇ ಬ್ಲಾಕ್‌ನ 13ನೇ ಮುಖ್ಯರಸ್ತೆಯಲ್ಲಿರುವ ಆಸ್ತಿ ಸಂಖ್ಯೆ ಕಾರ್ಪೊರೇಷನ್ ನಂ 751 (ಹಳೇ ಸಿಐಟಿಬಿ ನಂ 751, ಬ್ಲಾಕ್ III ರಾಜಾಜಿನಗರ ಎಕ್ಸ್ ಟೆನ್ಷನ್) ಅಳತೆ ಪೂರ್ವದಿಂದ ಪಶ್ಚಿಮಕ್ಕೆ 60 ಅಡಿ ಹಾಗೂ ಉತ್ತರದಿಂದ ದಕ್ಷಿಣಕ್ಕೆ 40 ಅಡಿ (ಒಟ್ಟು 2400 ಚದರ ಅಡಿ) ಈ ನಿವೇಶನದಲ್ಲಿ ಕಟ್ಟಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಆಸ್ತಿ ಸಂಖ್ಯೆ 742
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಆಸ್ತಿ ಸಂಖ್ಯೆ 750
ದಕ್ಷಿಣಕ್ಕೆ : ಆಸ್ತಿ ಸಂಖ್ಯೆ 752

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 1–6–2007ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು–1
ಬೆಂಗಳೂರು ನಗರ ಜಿಲ್ಲೆ

ಪಿ.ಆರ್. 925

**ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರ ನ್ಯಾಯಾಲಯದಲ್ಲಿ**
**ನಂ. 146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**
**ದಾವಾ ಅರ್ಜಿ ಸಂಖ್ಯೆ:ಡಿಆರ್‌ಬಿ–1/ಡಿಐಎಸ್/171/2006–07**

**ವಾದಿ:**
ನಿರ್ದೇಶಕರು
ದಿ ಮಹಾಲಕ್ಷ್ಮಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್, ನಂ. 664, 'ಆಶೀರ್ವಾದ್' 4ನೇ ಕ್ರಾಸ್, ಮಹಾಲಕ್ಷ್ಮಿ ಬಡಾವಣೆ ಬೆಂಗಳೂರು–560 086

**ಪ್ರತಿವಾದಿ :**
1. ಶ್ರೀಮತಿ ವಸುಮತಿ ಎಂ.ಎಸ್. ಕೋಂ ಆನಂದ್ ಪಿ. ಗೋಗಿ ನಂ. 36 ಅನ್ನಪೂರ್ಣೇಶ್ವರಿ ದೇವಸ್ಥಾನದ ಎದುರು, ನ್ಯೂ ಬ್ಯಾಂಕ್ ಕಾಲೋನಿ ಕೋಣನಕುಂಟೆ, ಬೆಂಗಳೂರು–62.
2. ಶ್ರೀ ಆನಂದ್ ಪಿ. ಗೋಗಿ ಬಿನ್ ಪ್ರಹ್ಲಾದ್ ಪಿ ಗೋಗಿ ನಂ. 36, ಅನ್ನಪೂರ್ಣೇಶ್ವರಿ ದೇವಸ್ಥಾನದ ಎದುರು, ನ್ಯೂ ಬ್ಯಾಂಕ್ ಕಾಲೋನಿ ಕೋಣನಕುಂಟೆ, ಬೆಂಗಳೂರು–62

ವಾದಿಯವರು ಪ್ರತಿವಾದಿಗಳ ವಿರುದ್ಧ ರೂ. 29,67,509/–ಗಳನ್ನು ಶೇಕಡ 18% ರಂತೆ ಬಡ್ಡಿ ಮತ್ತು ಶೇಕಡ 2% ರಂತೆ ಸುಸ್ತಿಬಡ್ಡಿ ವಸೂಲಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾವೆ ಹೂಡಿ ಜೊತೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲು ಅಥವಾ ಪರಭಾರೆ ಮಾಡಲು ಉದ್ದೇಶಿಸಿರುವುದಾಗಿ ನ್ಯಾಯಾಲಯದಲ್ಲಿ ಗಮನಕ್ಕೆ ತಂದ ಮೇಲೆ ಈ ನ್ಯಾಯಾಲಯವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಹೊರಡಿಸಲಾದ ದಿನಾಂಕ:31–12–2006ರ ನೋಟೀಸ್‌ನಲ್ಲಿ ಪ್ರತಿವಾದಿಗಳು ಒಂದು ವೇಳೆ ತೀರ್ಪಿಗೆ ಮುನ್ನಾ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 29,67,509/–ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:22–1–2007ರೊಳಗಾಗಿ ಅಧಿಕೃತ ಚಲನ್ ಅಥವಾ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿತ್ತು.

ಆದರೆ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:31–12–2006ರ ಆದೇಶದಲ್ಲಿ ನೀಡಿರುವ ಸೂಚನೆಯ ರೀತ್ಯಾ ರೂ. 29,67,509/–ಗಳನ್ನು ಈ ದಿನಾಂಕದವರೆವಿಗೂ ಸಂಘದಲ್ಲಿನ ಅಮಾನತ್ ಖಾತೆಗೆ ಜಮಾ ಮಾಡಿ ಚಲನ್/ರಸೀದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ

ನ್ಯಾಯಾಲಯದಲ್ಲಿರುವ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:31-12-2006ರಂದು ನೀಡಿರುವ ತೀರ್ಪಿಗೆ ಮುನ್ನಾ ನೋಟೀಸ್‌ನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ 21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಆದ ನಾನು, ಈ ಕೆಳಗೆ ಷೆಡ್ಯೂಲ್ ನಲ್ಲಿ ವಿವರಿಸಿರುವಂತೆ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನಾ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ-1/ಡಿಐಎಸ್/171/2006-07 ದಿನಾಂಕ:31-12-2006ನ್ನು ಈ ಮೂಲಕ ಸ್ಥಿರೀಕರಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ದಕ್ಷಿಣ ತಾಲ್ಲೂಕ್ ಉತ್ತರಹಳ್ಳಿ ಹೋಬಳಿ ಕೋಣನಕುಂಟೆ ಗ್ರಾಮದಲ್ಲಿರುವ ಖಾತೆ ಸಂಖ್ಯೆ 304 ಆಗಿರುವ ನಿವೇಶನ ಸಂಖ್ಯೆ:36, ಅಳತೆ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ ಹಾಗೂ ಉತ್ತರದಿಂದ ದಕ್ಷಿಣಕ್ಕೆ 31 ಅಡಿ ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಆಸ್ತಿಸಂಖ್ಯೆ 21
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಆಸ್ತಿ ಸಂಖ್ಯೆ 35
ದಕ್ಷಿಣಕ್ಕೆ : ಆಸ್ತಿ ಸಂಖ್ಯೆ 37

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 1-6-2007ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು-1
ಬೆಂಗಳೂರು ನಗರ ಜಿಲ್ಲೆ

ಪಿ.ಆರ್. 927

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-UNDER SECTION 59 (4) OF THE KARNATAKA VALUE ADDED TAX ACT, 2003**

**Sub :** KVAT Act 2003-Clarification under Section 59(4) regarding the tax applicable on `Railway or tramway track fixtures and fittings, etc.,

**Ref :** Application dated 28.4.2007 of M/s Systems Aids 9th Main Road, 1st Stage, Hennur Banaswadi Layout Kalyan Nagar, Bangalore-560 043

In their application dated 28.4.2007 cited above, M/s Systems Aids 9th Main Road, 1st Stage, Hennur Banaswadi Layout Kalyan Nagar, Bangalore-560 043 has sought clarification regarding rate of tax applicable on Railway or tramway track fixtures and fittings, etc.,

2. Section 59 (4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR. 44/07-08, Dated: 26th June 2007**

It is hereby clarified that Railway or tramway track fixtures and fittings, mechanical signaling, safety or traffic control equipment for railways, tramways, roads, oscillation monitoring system, tract recording system, data logger, Universal axle counter unit, wheel flaw detector,. LED type emergency light unit, micro processor control system for air-conditioned coaches with roof mounted package units, inverters for railways, power control system for railways", are taxable at 12.5% as per Section 4(1)(b) of the Karnataka Value Added Tax Act, 2003.

**B.A. HARISH GOWDA**
Commissioner of Commercial
Taxes, (Karnataka), Bangalore,

P.R. 920

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ವಿಷಯ : ಸಮಾಪನಾ ಆದೇಶಿತ ಡಾ:ಬಿ.ಆರ್. ಅಂಬೇಡ್ಕರ್ ಚರ್ಮ ಕೈಗಾರಿಕಾ ಸಹಕಾರ ಸಂಘ ನಿ:ಮಾರಶೆಟ್ಟಿ ಹಳ್ಳಿ, ಭದ್ರಾವತಿ ತಾ: ಇದರ ಪುನಃಶ್ಚೇತನದ ಬಗ್ಗೆ.

ಉಲ್ಲೇಖ : 1) ಈ ಕಚೇರಿಯ ಆದೇಶ ನಂ.ಡಿಆರ್‌ಎಸ್:ಸಮಾಪನೆ: ಡಿಎಲ್‌ಎಸ್:460:05–06:ದಿನಾಂಕ:29.3.06
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ ಇವರ ಪತ್ರ ನಂ. ಸನಿ–24:ಸಮಾಪನೆ:202:05–06:ದಿನಾಂಕ:8–8–2007.

**ಪ್ರಸ್ತಾವನೆ:**

ಡಾ: ಬಿ.ಆರ್. ಅಂಬೇಡ್ಕರ್ ಚರ್ಮ ಕೈಗಾರಿಕಾ ಸಹಕಾರ ಸಂಘಗಳ ನಿ:ಮಾರಶೆಟ್ಟಿ ಹಳ್ಳಿ, ಭದ್ರಾವತಿ ತಾಲ್ಲೂಕ್, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ, ಇವರ ಕಾರ್ಯಾಲಯದಲ್ಲಿ ಸಂಖ್ಯೆ:ಎಆರ್–24:ನೊಂದಣಿ:ಆರ್‌ಜಿಎನ್:60:25240:97–98, ದಿನಾಂಕ:12–6–1998ರಲ್ಲಿ ನೊಂದಣಿಯಾಗಿದ್ದು, ಈ ಸಂಘವು ಸಮರ್ಪಕವಾಗಿ ಕೆಲಸ ನಿರ್ವಹಿಸದ ಕಾರಣ ಉಲ್ಲೇಖ (1) ರನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಗೊಳಿಸಲಾಗಿದೆ. ಸದರಿಯವರು ಪ್ರಭಾರ ವಹಿಸಿಕೊಂಡು ಸಮಾಪನಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿರುತ್ತಾರೆ. ಈ ಮಧ್ಯೆ ಶಾಸಕರು, ಹೊಳೆಹೊನ್ನೂರು ಕ್ಷೇತ್ರ, ರವರು ಡಾ:ಬಿ.ಆರ್. ಅಂಬೇಡ್ಕರ್ ಚರ್ಮ ಕೈಗಾರಿಕಾ ಸಹಕಾರ ಸಂಘದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸದಸ್ಯರಿದ್ದು, ಈ ಹಿಂದೆ ಸಂಘದ ಅಧ್ಯಕ್ಷರಾದ ಲೋಕೇಶ್ವರಪ್ಪನವರು ಚೆನ್ನಾಗಿ ಕೆಲಸಕಾರ್ಯಗಳನ್ನು ನಿರ್ವಹಿಸಿಕೊಂಡು ಬಂದಿದ್ದು, ಸದರಿಯವರು ಸಂಘವನ್ನು ಸಮಾಪನೆಗೊಳಿಸಬಾರದಾಗಿ ಮನವಿ ಮಾಡಿಕೊಂಡಿರುವ ಕಾರಣ ಸಂಘವನ್ನು ಪುನಃ ಮುಂದುವರೆಸಿಕೊಂಡು ಹೋಗಲು ಅವಕಾಶ ಕಲ್ಪಿಸಿಕೊಡಿ ಎಂದು ದಿನಾಂಕ:25–7–06 ರ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಸಂಘವನ್ನು ಪುನಃಶ್ಚೇತನಗೊಳಿಸುವ ಸಂಬಂಧವಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ ಇವರು ಸಂಘದ ಸಮಾಪನಾಧಿಕಾರಿಯವರಾದ ಸಹಕಾರ ಅಭಿವೃದ್ಧಿ ಅಧಿಕಾರಿಯವರಿಂದ ಪ್ರಸ್ತಾವನೆ ಪಡೆದು, ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಶಾಸಕರಾದ ಶ್ರೀ ಬಸವಣ್ಯಪ್ಪ, ಹೊಳೆಹೊನ್ನೂರು ಕ್ಷೇತ್ರ, ಇವರು ತಿಳಿಸಿರುವಂತೆ, ಹೊಳೆಹೊನ್ನೂರು ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಚರ್ಮ ಕುಶಲಗಾರರಿಗೆ ಆಧಾರವಾಗಿ ಈ ಸಹಕಾರ ಸಂಘ ಮಾತ್ರ ಸಹಾಯಕವಾಗಿದೆ. ಕೈಗಾರಿಕೆ ಇಲಾಖೆಯಿಂದ ಖಾದಿ ಗ್ರಾಮೋದ್ಯೋಗ ಇಲಾಖೆಯೊಂದಿಗೆ ಮತ್ತು ಚರ್ಮಗಾರ ಸದಸ್ಯರಿಗೆ ಸಂಪರ್ಕ ಸೇತುವೆಯಾಗಿ ಈ ಸಂಘವು ಕೆಲಸ ಮಾಡುತ್ತಿರುತ್ತದೆ. ಸರ್ಕಾರದಿಂದ ನೀಡಲಾಗಿರುವ ವಿವಿಧ ಯೋಜನೆಗಳಲ್ಲಿ ಈ ಸಂಘದ ಅಗತ್ಯತೆ ಇರುವುದರಿಂದ ಸಂಘಕ್ಕೆ ಕನಿಷ್ಠ ರೂ. 50000–00 ಗಳ ಷೇರು ಸಂಗ್ರಹಿಸುವುದು ಮತ್ತು ಸಂಘದ ಆಡಿಟ್ ಮಾಡಿಸುವುದು ಈ ಷರತ್ತಿನೊಂದಿಗೆ ಸಂಘವನ್ನು ಪುನಃಶ್ಚೇತನಗೊಳಿಸಬಹುದೆಂಬ ಅಭಿಪ್ರಾಯದೊಂದಿಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಹಾಗೂ ಸಂಘದ ಸಮಾಪನಾಧಿಕಾರಿಗಳು ದಿನಾಂಕ:23–07–2007 ರಂದು ಸಮಾಪನಾಧಿಕಾರಿಗಳ ಸಭೆಯಲ್ಲಿ ನಿರ್ಣಯಿಸಿರುತ್ತಾರೆ.

ಶಾಸಕರ ಪತ್ರ, ಸಮಾಪನಾಧಿಕಾರಿಗಳ ನಡವಳಿಕೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ, ಇವರ ಶಿಫಾರಸ್ಸಿನನ್ವಯ, ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

### ಆದೇಶ

**ಕ್ರ:ಸಂ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:168:07–08:013, ದಿನಾಂಕ:23ನೇ ಆಗಸ್ಟ್ 2007**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರಾದ ಸಿ.ಎನ್. ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಎಂಡಬ್ಲ್ಯೂ: 69:ಸಿಎಲ್‌ಎಂ:2001:ದಿನಾಂಕ:21–11–2001ರಲ್ಲಿ ದತ್ತವಾದ ಅಧಿಕಾರದನ್ವಯ, ಡಾ:ಬಿ.ಆರ್. ಅಂಬೇಡ್ಕರ್–ಚರ್ಮ ಕೈಗಾರಿಕಾ ಸಹಕಾರ ಸಂಘ ನಿ., ಮಾರಶೆಟ್ಟಿಹಳ್ಳಿ, ಭದ್ರಾವತಿ ತಾಲ್ಲೂಕು, ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಷರತ್ತು ಪೂರಕವಾಗಿ ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು:**

1) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿ ಪ್ರಕಾರ ಇತ್ತೀಚಿನ ತಿದ್ದುಪಡಿ ಆಧಾರಿತವಾಗಿ ಬೈಲಾ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯತಕ್ಕದ್ದು.

2) ಸಮಾಪನಾ ಆಡಳಿತ ಪೂರ್ವದಲ್ಲಿದ್ದ ಈ ಸಂಘದ ಕಾರ್ಯವ್ಯಾಪ್ತಿಯಂತೆ ಕಾರ್ಯನಿರ್ವಹಿಸತಕ್ಕದ್ದು. ಈ ಸಂಘದ ಕಾರ್ಯವ್ಯಾಪ್ತಿಯು ಬೇರೆ ಸಹಕಾರ ಸಂಘಕ್ಕೂ ಸೇರ್ಪಡೆಯಾಗಿದ್ದಲ್ಲಿ ಆ ಸಂಘದವರು ಸದರಿ ಕಾರ್ಯವ್ಯಾಪ್ತಿಯನ್ನು ಬಿಟ್ಟುಕೊಡತಕ್ಕದ್ದು. ಹಾಗೂ ಆಸ್ತಿ ಜವಾಬ್ದಾರಿಯನ್ನು ವರ್ಗಾಯಿಸತಕ್ಕದ್ದು.

3) ಸದಸ್ಯತ್ವ ಹೆಚ್ಚಿನ, ಠೇವಣಾತಿ ಸಂಗ್ರಹಿಸಿ ಸಂಘದ ದುಡಿಯುವ ಬಂಡವಾಳ ಹೆಚ್ಚಿಸಿಕೊಳ್ಳತಕ್ಕದ್ದು.

4) ಸಂಘದ ಸಮಾಪನಾಧಿಕಾರಿಯಾದ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ, ಇವರು ಎರಡು ತಿಂಗಳೊಳಗಾಗಿ ಆಡಳಿತ ಮಂಡಳಿ ರಚನೆಗಾಗಿ ಸಂಬಂಧಿಸಿದ ಅಧಿಕಾರಿಯವರಿಂದ ಚುನಾವಣಾಧಿಕಾರಿ ನೇಮಕಾತಿ ಪಡೆದು ಸರ್ವಸದಸ್ಯರ ಸಭೆ ಕರೆದು ಪ್ರಭಾರ ವಹಿಸಿಕೊಡಲು ಆದೇಶಿಸಿದೆ.

ಈ ಆದೇಶವನ್ನು ಈ ಕಚೇರಿಯ ಮೊಹರು ಹಾಗೂ ನನ್ನ ಸ್ವಸಹಿಯೊಂದಿಗೆ ಈ ದಿನ ದಿನಾಂಕ:23ನೇ ಆಗಸ್ಟ್ 2007 ರಂದು ಹೊರಡಿಸಿದೆ.

**ಸಿ.ಎನ್. ದೇವರಾಜ್**
ಪಿ.ಆರ್. 1223 ಸಹಕಾರ ಸಂಘಗಳ ಉಪನಿಬಂಧಕರು-1
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಕ್ರ:ಸಂ:ಡಿಆರ್ಎಸ್:ಸಮಾಪನೆ:35:ಡಿಎಲ್ಎಸ್:07-08: 1021, ದಿನಾಂಕ:31ನೇ ಆಗಸ್ಟ್ 2007**

**ವಿಷಯ :** ನಿಷ್ಕ್ರಿಯಗೊಂಡಿರುವ ಗುಡುಮಘಟ್ಟ ಹಾಲು ಉತ್ಪಾದಕರ ಸಹಕಾರ ಸಂಘ ನಿ:ಭದ್ರಾವತಿ ತಾಲ್ಲೂಕು ಇದರ ಸಮಾಪನೆ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಇವರ ಪತ್ರ ನಂ. ಸನಿ24:ಸಮಾಪನೆ:71:06-07:ದಿನಾಂಕ:7-5-2007.
2) ಈ ಕಚೇರಿಯ ಪತ್ರ ಸಮಸಂಖ್ಯೆ ದಿ:19-6-07

**ಪ್ರಸ್ತಾವನೆ:**

ಗುಡುಮಘಟ್ಟ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಭದ್ರಾವತಿ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ ಇವರ ಕಚೇರಿಯಲ್ಲಿ ಸಂಖ್ಯೆ:ಎಆರ್-24:ನೊಂದಣಿ:ಆರ್ ಜಿಎನ್:73:326294:99-1000:ದಿನಾಂಕ:20-10-1999ರಲ್ಲಿ ನೊಂದಣಿಯಾಗಿದ್ದು, ಭದ್ರಾವತಿ ತಾಲ್ಲೂಕಿನ ತಡಸ ಮತ್ತು ಗುಡುಮಘಟ್ಟ ಗ್ರಾಮಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

ಸಂಘವು ಬೈಲಾದ ಉದ್ದೇಶಗಳನ್ನು ಈಡೇರಿಸುವಲ್ಲಿ ವಿಫಲವಾಗಿರುತ್ತದೆ. ಸದಸ್ಯರು ಸಂಘಕ್ಕೆ ಹಾಲು ಸರಬರಾಜು ಮಾಡುತ್ತಿಲ್ಲವಾದ್ದರಿಂದ ಎರಡು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘವನ್ನು ನಡೆಸಲು ಸದಸ್ಯರಿಗಾಗಲೀ ಆಡಳಿತ ಮಂಡಳಿಗಾಗಲೇ ಆಸ್ತಿ ಇಲ್ಲದೇ ಇರುವುದರಿಂದ ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲು ಕೋರಿ ಉಲ್ಲೇಖ (1)ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿಯವರ ಪ್ರಸ್ತಾವನೆಯನ್ವಯ ಉಲ್ಲೇಖ (2)ರಲ್ಲಿ ಈ ಕಚೇರಿಯಿಂದ ಸಂಘದ ಆಡಳಿತ ಮಂಡಳಿಯವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸಂಘದ ನೋಟೀಸ್ ಜಾರಿಯಾಗಿ ಒಂದು ತಿಂಗಳು ಕಳೆದಿದ್ದು ಇದುವರೆಗೂ ಸಂಘದ ಸದಸ್ಯರಾಗಲೀ ಆಡಳಿತ ಮಂಡಳಿಯವರಾಗಲೀ ಸಮಜಾಯಿಷಿ ನೀಡದಿರುವುದರಿಂದ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಾಣುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ.ಸಿಎಂಡಬ್ಲ್ಯೂ: 69:ಸಿಎಲ್ಎಂ:200:ದಿನಾಂಕ:21-11-2001ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್. ದೇವರಾಜ್ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ, ಆದ ನಾನು ಭದ್ರಾವತಿ ತಾಲ್ಲೂಕಿನ ಗುಡುಮಘಟ್ಟ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಭದ್ರಾವತಿ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರನ್ವಯ ಸಮಾಪನಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯಾವರು ಈ ಆದೇಶದ 30 ದಿನಗಳೊಳಗಾಗಿ ಸಂಘದ ಪ್ರಭಾರವನ್ನು ಪಡೆದು ನಡವಳಿಕೆ ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ:31ನೇ ಆಗಸ್ಟ್ 2007ರಂದು ನನ್ನ ಸ್ವಸಹಿ ಮತ್ತು ಈ ಕಚೇರಿಯ ಮುದ್ರೆಯೊಂದಿಗೆ ಹೊರಡಿಸಿದೆ.

**ಸಿ.ಎನ್. ದೇವರಾಜ್**
ಪಿ.ಆರ್. 1224 ಸಹಕಾರ ಸಂಘಗಳ ಉಪನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ-ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ :** ಸಮಾಪನೆಗೊಂಡಿರುವ ಶ್ರೀ ನಂದಿ ಕ್ರೆಡಿಟ್ ಕೋ-ಅಪರೇಟಿವ್ ಸೊಸೈಟಿ ನಿ., ದಾವಣಗೆರೆ, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 (3) ರನ್ವಯ ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1) ಈ ಕಛೇರಿ ಪತ್ರ ಸಮ ಸಂಖ್ಯೆ:ಡಿಆರ್/ಡಿವಿಜಿ/ಸಮಾಪನೆ/ಸಿಆರ್-34/2006-07 ದಿ:16.3.2006

2) ಈ ಕಚೇರಿ ಪತ್ರಸಂಖ್ಯೆ:ಡಿಆರ್/ಡಿವಿಜಿ/ಸಮಾಪನೆ/ಸಿಆರ್-11/-06-07 ದಿ:20.6.2006

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ-31/ಎಲ್‌ಕ್ಯೂಡಿ/ಶ್ರೀನಂದಿ/ಕೆ.ಸಿ.ಎಸ್/06-07 ದಿ:5.2.2007

4) ಅಧ್ಯಕ್ಷರು ಮತ್ತು ಕಾರ್ಯದರ್ಶಿ, ಶ್ರೀನಂದಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ., ನಿಟುವಳ್ಳಿ ದಾವಣಗೆರೆ ಇವರ ಪತ್ರ ದಿ:7-6-2007

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ 6-7 ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ(1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಉಲ್ಲೇಖ (2)ರ ಆದೇಶದ ರೀತ್ಯಾ ಶ್ರೀ ಎನ್.ಜಿ. ರುದ್ರಪ್ಪ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯಾಗಿ ಮಾರ್ಪಾಡು ನೇಮಕಾತಿ ಆದೇಶ ಮಾಡಲಾಗಿತ್ತು. ದಿ:5-1-2007ರಂದು ಶ್ರೀ ಎಂ. ಪ್ರಕಾಶ್ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸರ್ವಸದಸ್ಯರ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹಾಗೂ ರೂಪಿಸಿಕೊಂಡಿರುವ 5 ವರ್ಷಗಳ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (3)ರಲ್ಲಿ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ, ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ದಿ:5.1.2007 ರಂದು ಜರುಗಿದ ಸಭಾ ನಡವಳಿಕೆಗಳು, 2001-02 ರಿಂದ 2006-07ನೇ ಸಾಲಿನ ಲೆಕ್ಕಪರಿಶೋಧನಾ ಆರ್ಥಿಕ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ. ಅದೂ ಅಲ್ಲದೆ ಉಲ್ಲೇಖ (4)ರ ಪತ್ರದಲ್ಲಿ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಸಂಘವನ್ನು ಪುನಃಶ್ಚೇತನಗೊಳಿಸಿಕೊಡುವಂತೆ ಕೋರಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ಎಲ್ಲಾ ನ್ಯೂನ್ಯತೆಗಳನ್ನು ಆರುತಿಂಗಳ ಅವಧಿಯೊಳಗೆ ಸರಿಪಡಿಸಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸಲಾಗುವುದು ಹಾಗು ಪ್ರಸ್ತಾವೆಯಲ್ಲಿ ಸಲ್ಲಿಸಿದ 5 ವರ್ಷಗಳ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಗತಿ ಸಾಧಿಸುವ ಷರತ್ತಿಗೊಳಪಟ್ಟು, ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಕ್ರಿಯಾಯೋಜನೆ**

| ಕ್ರ.ಸಂ | ವಿವರ | 2007-08 | 2008-09 | 2009-10 | 2010-11 | 2011-12 |
|---|---|---|---|---|---|---|
| 1 | ಸದಸ್ಯತ್ವ | 300 | 400 | 500 | 600 | 650 |
| 2 | ಷೇರು ಬಂಡವಾಳ | 3.00 | 4.00 | 5.00 | 6.00 | 8.00 |
| 3 | ಠೇವಣಿ | 8.00 | 10.00 | 12.00 | 14.00 | 20.00 |
| 4 | ಸಾಲನೀಡಿಕೆ | 8.00 | 9.00 | 10.00 | 11.00 | 12.00 |
| 5 | ಸಾಲ ವಸೂಲಿ | 8.00 | 9.00 | 10.00 | 11.00 | 12.00 |

**ಆದೇಶ**

**ನಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್-34/2005-06, ದಿನಾಂಕ:2ನೇ ಜುಲೈ 2007**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ.ಸಿಎಂಡಬ್ಲ್ಯೂ: 69:ಸಿಎಲ್‌ಎಂ:2001:ದಿನಾಂಕ:21-11-2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪ-ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಶ್ರೀ ನಂದಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ. ದಾವಣಗೆರೆ ಇದರ ಉಲ್ಲೇಖ (1) ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಶ್ರೀ ಎನ್.ಜಿ. ರುದ್ರಪ್ಪ. ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ ಆಗಸ್ಟ್ 2007ರ ಮಾಹೆಯ ಅಂತ್ಯಕ್ಕೆ ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ; 2-7-2007 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ -ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 924

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಚೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ :** ಸಮಾಪನಾ ಆದೇಶಿತ ವ್ಯವಸಾಯ ಸೇವಾ ಸಹಕಾರ ಸಂಘ ನಿ:ಚಿಕ್ಕ ಜಂಬೂರು, ಶಿಕಾರಿಪುರ ತಾಲ್ಲೂಕು, ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1) ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಇವರ ಆದೇಶ ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:82:06-07:ದಿನಾಂಕ:6.9.2006.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ಪತ್ರ ನಂ. ಸಸಂಸನಿ-25:ಸಮಾಪನೆ:ಸಿಆರ್-8:2006-07:ದಿನಾಂಕ:24-04-2007

**ಪ್ರಸ್ತಾವನೆ :**

ವ್ಯವಸಾಯ ಸೇವಾ ಸಹಕಾರ ಸಂಘ ನಿ:ಚಿಕ್ಕ ಜಂಬೂರು, ಶಿಕಾರಿಪುರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಾರ್ಯಾಲಯದಲ್ಲಿ ಕ್ರ:ಸಂ:ಎಆರ್‌ಎಸ್:1407:66-67:ದಿನಾಂಕ:14-6-1968ರ ಪ್ರಕಾರ ನೊಂದಣಿಯಾಗಿರುತ್ತದೆ. ಹಾಗೂ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಈ ಸಂಘವು ತನ್ನ ನೊಂದಾಯಿತ ಬೈಲಾದ ಉದ್ದೇಶದಂತೆ ಕಾರ್ಯನಿರ್ವಹಿಸುತ್ತಿಲ್ಲವಾದ ಕಾರಣ ಸ್ಥಗಿತಗೊಂಡಿರುತ್ತದೆ. ಆದಕಾರಣ ಉಲ್ಲೇಖ(1) ರ ಈ ಕಚೇರಿಯ ಆದೇಶದಂತೆ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿಕಾರಿಪುರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ. ಸದರಿಯವರು ಸಂಘದ ನೊಂದಣಿಯನ್ನು ರದ್ಧತಿಗೊಳಿಸುವ ಸಲುವಾಗಿ ಆದ್ಯತಾಪಟ್ಟಿಯನ್ನು ಅನುಮೋದನೆ ಮಾಡಲು ದಿನಾಂಕ:4-5-2007 ರಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಸಂಘದ ಆದ್ಯತಾಪಟ್ಟಿಯನ್ನು ಅನುಮೋದಿಸಲಾಗಿರುತ್ತದೆ. ಸಂಘದಲ್ಲಿದ್ದ ಸರ್ಕಾರಿ ಷೇರು ರೂ. 25000-00 ಮತ್ತು ಡಿವಿಡೆಂಡ್ ರೂ. 2700-00 ಬಾಬ್ತನ್ನು ಡಿ.ಸಿ.ಸಿ. ಬ್ಯಾಂಕಿನ ಚಾಲ್ತಿ ಖಾತೆಯಲ್ಲಿರುವ ರೂ.32, 325-00 ಗಳಲ್ಲಿ ತೀರುವಳಿ ಮಾಡಲಾಗಿರುತ್ತದೆ. ಮಾಜಿ ಕಾರ್ಯದರ್ಶಿ ಶ್ರೀ ಹರಿಯಪ್ಪ ಹಾಗೂ ಮೊಹಿದ್ದೀನ್ ಎಂ. ಯೂಸೂಫ್ ಸಾಬ್, ಅಬ್ದುಲ್ ಜಬ್ಬಾರ ಇವರಿಂದ ಕ್ರಮವಾಗಿ ರೂ. 236-35, ರೂ. 600-00, ರೂ, 10950-00 ಮತ್ತು ರೂ. 261-04 ಹಾಗೂ 1977-78ನೇ ಸಾಲಿನ ಠೇವಣಿ ರೂ. 142-90, 1980-81 ಮತ್ತು 1981-82ನೇ ಸಾಲಿನ ಆಡಿಟ್ ಆಕ್ಷೇಪ ರೂ. 1599-25 ಮತ್ತು ರೂ. 160-00, ಒಟ್ಟು ರೂ. 13949-54ಗಳ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹ ಇಲ್ಲದಿರುವುದರಿಂದ ಹಣದ ಹೊಂದಾಣಿಕೆ ಮೂಲಕ ನಷ್ಟದ ಖಾತೆಗೆ ವರ್ಗಾಯಿಸಲು ದಿನಾಂಕ 25-3-2007ರಂದು ನಡೆಸಿದ ಸಮಾಪನಾಧಿಕಾರಿಗಳ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ.

ಈ ಮೇಲ್ಕಂಡ ಅಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಿದ್ದು, ಸಮಾಪನಾಧಿಕಾರಿಯವರು ಸರ್ಕಾರದ ಷೇರು ಮತ್ತು ಡಿವಿಡೆಂಡನ್ನು ಕಟ್ಟಿರುವುದರಿಂದ, ಡಿಸಿಸಿ ಬ್ಯಾಂಕ್‌ಗೆ ಬರಬೇಕಾದ ಸಾಲಕ್ಕೆ ಸಂಬಂಧಿಸಿದಂತೆ ಬಡ್ಡಿಮನ್ನಾ ಬಿಲ್ ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿರುವುದರಿಂದ ಸರ್ಕಾರದಿಂದ ಬಡ್ಡಿಮನ್ನಾ ಮಂಜೂರಾದಲ್ಲಿ ಡಿಸಿಸಿಬ್ಯಾಂಕಿನೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಜವಾಬ್ದಾರಿ ಬ್ಯಾಂಕಿನವರದ್ದಾಗಿರುತ್ತದೆಯಾದ್ದರಿಂದ ಸಮಾಪನೆ ಆದ ಸಂಘಕ್ಕೆ ಹಣವು ಬರುವ ಅಂಶವಿಲ್ಲದ ಪ್ರಯುಕ್ತ ಸಮಾಪನಾಧಿಕಾರಿಗಳು ಆಸ್ತಿ ಜವಾಬ್ದಾರಿಗಳನ್ನು ಶೂನ್ಯಗೊಳಿಸಲಾಗಿದೆ ಎಂದು ತಿಳಿಸಿದ್ದು; ಅದರಂತೆ 2005-06ನೇ ಸಾಲಿನವರೆಗೆ ಆಡಿಟ್ ಆದ ಲೆಕ್ಕಪತ್ರಗಳನ್ನಾಧರಿಸಿ ದಿನಾಂಕ 25-3-2007 ರವರೆಗಿನ ಜಮಾ-ಖರ್ಚು, ಲಾಭ-ನಷ್ಟದ ತಃಖ್ತೆಯನ್ನು ತಯಾರಿಸಿ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಹಾಗೂ ದಿನಾಂಕ:25-3-2007 ರಂದು ಅಂತಿಮ ಸಭೆ ನಡೆಸಿ ಸಂಘದ ನೊಂದಣಿಯನ್ನು ರದ್ದುಪಡಿಸಲು ಸಭೆಯಲ್ಲಿ ನಿರ್ಣಯಿಸಿ ನಡವಳಿಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಸಾಗರ, ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ಸಂಘದ ನೊಂದಣಿ ರದ್ಧತಿ ಶಿಫಾರಸ್ಸು ಮಾಡಿರುವುದರಿಂದ ಸಮಾಪನಾಧಿಕಾರಿಯವರ ನಿರ್ಣಯ, ಸಹಾಯಕ ನಿಬಂಧಕರು, ಸಾಗರ ಇವರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ಧತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ:ಸಂ:ಡಿಆರ್‌ಎಸ್:ಎಲ್ ಕ್ಯೂಡಿ:12:07–08: 777, ದಿನಾಂಕ:2ನೇ ಜುಲೈ 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75 ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ :69:ಸಿಎಲ್‌ಎಂ:2001:ದಿನಾಂಕ:21–11–2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಸಿ.ಎನ್. ದೇವರಾಜ್, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾ ಆದೇಶಿತ ಚಿಕ್ಕ ಜಂಬೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್, ಶಿಕಾರಿಪುರ ತಾಲ್ಲೂಕ್, ಇದರ ನೊಂದಣಿ ಸಂ:ಎಆರ್‌ಎಸ್:1407:66–67:ದಿನಾಂಕ:14–6–1968 ಇದನ್ನು ತಕ್ಷಣ ಜಾರಿಗೆ ಬರುವಂತೆ ನೊಂದಣಿ ರದ್ದತಿಗೆ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ ಇವರ ಕಚೇರಿಯಲ್ಲಿ ಕಾಯ್ದಿರಿಸತಕ್ಕದ್ದು,

ಈ ಆದೇಶವನ್ನು ಈ ದಿನ ಅಂದರೆ 2ನೇ ಜುಲೈ 2007ರಂದು ನನ್ನ ಸ್ವಸಹಿ ಮತ್ತು ಕಚೇರಿಯ ಮುದ್ರೆಯೊಂದಿಗೆ ಹೊರಡಿಸಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಪಿ.ಆರ್. 958

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಆದೇಶ ನಂ:ಇಎಕ್ಸ್‌ಇ:ಡಿಟಿಸಿಆರ್‌ಎಂ:119:2004–05 ದಿನಾಂಕ:10ನೇ ಜುಲೈ 2007**

**ಉಪಸ್ಥಿತರು:** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,
ಕೊಡಗು ಜಿಲ್ಲೆ ಮಡಿಕೇರಿ

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು<br>ನಾಪೋಕ್ಲು ಪೋಲಿಸ್ ಠಾಣೆ | | 1) ಬೈರಕುಂದಿರ ಸೋಮಯ್ಯ ತಂದೆ:ಪೌತಿ:ಪೂವಯ್ಯ<br>ಕೊಣಂಜಗೇರಿ ಗ್ರಾಮ, ಪಾರಾಣಿ<br>2) ಬಲ್ಲಿಕಾಳಂಡ ಲಾಲಾಜಿ<br>ತಂದೆ:ಪೌತಿ:ತಿಮ್ಮಯ್ಯ, ಕಡಂಗ, ಮರೂರು ಗ್ರಾಮ<br>3) ಕಾದೀರ ಉಮೇಶ,<br>ಪಾರಾಣಿ, ಕೊಣಂಜಗೇರಿ ಗ್ರಾಮ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:18.1.2005 ರಂದು ನಾಪೋಕ್ಲು ಪೋಲೀಸ್ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಬಲಮುರಿ ಜಂಕ್ಷನ್ ಬಳಿ ತಪಾಸಣೆಗಾಗಿ ಮುಕ್ಕಾಂ ಹೂಡಿದ್ದು, ಇಬ್ಬರು ಅಸಾಮಿಗಳು ಚೀಲಗಳನ್ನು ತಮ್ಮ ಬಳಿ ಇಟ್ಟುಕೊಂಡಿದ್ದು, ಇಲಾಖಾ ಜೀಪನ್ನು ಕಂಡು ಓಡಲು ಪ್ರಯತ್ನಿಸಿದಾಗ ಅವರುಗಳನ್ನು ಹಿಡಿದು ಚೀಲಗಳನ್ನು ಬಿಚ್ಚಿ ನೋಡಲಾಗಿ ಸದರಿ ಚೀಲದಲ್ಲಿ ಸಾರಾಯಿ ಪ್ಯಾಕೇಟುಗಳು ಇದ್ದು, ಇವುಗಳನ್ನು ಇಟ್ಟುಕೊಂಡ ಬಗ್ಗೆ ಸರಕಾರದ ರಹದಾರಿ ಪತ್ರ ಕೇಳಲಾಗಿ ಯಾವುದೂ ಇಲ್ಲವೆಂದು ತಿಳಿಸಿರುತ್ತಾರೆ. ಸದರಿ ಸಾರಾಯಿ ಪ್ಯಾಕೇಟುಗಳನ್ನು ಯಾರಿಂದ ತೆಗೆದುಕೊಂಡ ಬಗ್ಗೆ ವಿಚಾರಿಸಿದಾಗ ಪಾರಾಣಿ ಕೊಣಂಜಗೇರಿ ಗ್ರಾಮಕ್ಕೆ ಸೇರಿದ ಕಾದೀರ ಉಮೇಶ್ ಎಂಬುವವರು ಅವರ ಬಾಬ್ತು ಜೀಪಿನಲ್ಲಿ ತಂದು ಇಳಿಸಿ ನಮ್ಮ ಸ್ವಾಧೀನಕ್ಕೆ ಮಾರಾಟ ಮಾಡಲು ಕೊಟ್ಟುಹೋಗಿದ್ದಾರೆ ಎಂದು ಸ್ವ ಇಚ್ಛಾ ಹೇಳಿಕೆ ನೀಡಿರುತ್ತಾರೆ. ಕಾದೀರ ಉಮೇಶರವರು ಜೀಪಿನೊಂದಿಗೆ ತಲೆಮರೆಸಿಕೊಂಡಿರುವುದರಿಂದ ಸದರಿ ಜೀಪು ಹಾಗೂ ಆರೋಪಿ ಪತ್ತೆ ಕಾರ್ಯದ ಬಗ್ಗೆ ಪಿ.ಸಿ. 272ರ ಟಿ.ಎಂ. ಕಾವೇರಪ್ಪರವರನ್ನು ನೇಮಿಸಿದ್ದು, ಸದರಿಯವರು ಪಾರಾಣಿ ಕೊಣಂಜಗೇರಿ ಗ್ರಾಮಕ್ಕೆ ಹೋಗಿ ಬಾತ್ಮಿದಾರರಿಂದ ಮಾಹಿತಿ ಸಂಗ್ರಹಿಸಿ ಸದರಿ ನಂಬರಿನ ಜೀಪನ್ನು ಕೊಣಂಜಗೇರಿ ರಸ್ತೆಯ ಬದಿಯಲ್ಲಿ ಆರೋಪಿ ನಿಲ್ಲಿಸಿ ಹೋಗಿರುವುದು ಪತ್ತೆಯಾಗಿ, ಪತ್ತೆಯಾದ ಜೀಪನ್ನು ಠಾಣೆಗೆ ತಂದು ಪಂಚಾಯತುದಾರರ ಸಮಕ್ಷಮ ಮಹಜರು ಬರೆದು ಸದರಿ 2000&100 ಎಂ.ಎಲ್. ಪ್ಯಾಕೇಟುಗಳ ಸಾಗಾಣಿಕೆಯು ಜೀಪು ಸಂಖ್ಯೆ:ಕೆಎ–12–4453 ರಲ್ಲಿ ಅಕ್ರಮವಾಗಿ ರಹದಾರಿ ಇಲ್ಲದೆ ಸಾಗಾಣಿಕೆ ಮಾಡಿದ್ದು ಅಪರಾಧವಾದ್ದರಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 34 ರ ಪ್ರಕಾರ ಮೊಕದ್ದಮೆ ಸಂ:4:2005, ದಿನಾಂಕ:18–1–2005 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ತನಿಖೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ಮಡಿಕೇರಿ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಡಿಕೇರಿಯವರು ವಶಪಡಿಸಿಕೊಂಡ 2000 & 100 ಮಿಲಿ ಸಾರಾಯಿ ಪ್ಯಾಕೇಟ್‌ಗಳಿಂದ ಒಟ್ಟು 100 ಮಿಲಿನ 8 ಪ್ಯಾಕೇಟ್‌ಗಳನ್ನು ಮಾದರಿಯಾಗಿ ತೆಗೆದಿದ್ದು, ಸದರಿ ಸಾರಾಯಿ ಪ್ಯಾಕೇಟ್‌ಗಳನ್ನು ದಿನಾಂಕ:26.4.2005 ರಂದು ಸಹಾಯಕ ರಾಸಾಯನಿಕ ತಜ್ಞರು, ಮೈಸೂರು ಇವರಿಗೆ ಕಳುಹಿಸಲಾಗಿದ್ದು, ಅದರ ವರದಿ ದಿನಾಂಕ:10.5.2005 ರಲ್ಲಿ ಸದರಿ ಪ್ಯಾಕೇಟ್ ನಲ್ಲಿದ್ದ ದ್ರವದಲ್ಲಿ ಶೇ. 34.25 ವಿ:ವಿ ಮದ್ಯಸಾರದ ಅಂಶದ ಪ್ರಮಾಣ ಪತ್ತೆಯಾಗಿರುವುದಾಗಿ ತಿಳಿಸಿರುತ್ತಾರೆ. ಹಾಗೂ ಸಾರಾಯಿ ಎಂದು ದೃಢಪಟ್ಟಿರುತ್ತದೆ. ಆದುದರಿಂದ ಸದರಿ ಸಾರಾಯಿಯನ್ನು ಸಾರ್ವಜನಿಕರಿಗೆ ವಿತರಿಸಿದಲ್ಲಿ ಆರೋಗ್ಯ ಹಾಗೂ ಪ್ರಾಣಾ ಹಾನಿಯಾಗುವ ಸಂಭವವಿರುವುದರಿಂದ ಈ ಕಛೇರಿಯ ದಿನಾಂಕ:16.12.2005ರಲ್ಲಿನ ಆದೇಶದಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲಾಗಿರುತ್ತದೆ.

ದಿನಾಂಕ:13.4.2005 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿರವರಿಗೆ ಪತ್ರ ಬರೆದು ವಾಹನ ಸಂ:ಕೆಎ–12–4453 ಕ್ಕೆ ಸಂಬಂಧಪಟ್ಟ ವಾಹನದ ಮಾಲೀಕರ ದೃಢೀಕರಣ ಪತ್ರವನ್ನು ಕೋರಲಾಗಿತ್ತು. ಸದರಿಯವರು ದಿನಾಂಕ:23.8.2005 ರಂದು ವಾಹನದ ಮಾಲೀಕತ್ವಕ್ಕೆ ಸಂಬಂಧಪಟ್ಟ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ಕೆ.ಯು. ಪಳಂಗಪ್ಪ ಪಾರಾಣಿ ಗ್ರಾಮ, ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ಎಂದು ನಮೂದಿಸಿದ್ದು, ಆದುದರಿಂದ ದಿನಾಂಕ:29.8.2005 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 'ಬಿ' ರನ್ವಯ ಕಾರಣ ಕೇಳಿ ನೋಟೀಸ್ ನೀಡಲಾಗಿತ್ತು. ಸದರಿ ನೋಟೀಸ್‌ಗೆ ಅವರ ಪರ ವಕೀಲ ರಿಂದ ದಿನಾಂಕ:12.9.2005 ರಂದು ಉತ್ತರವನ್ನು ನೀಡಿ ಸದರಿ ವಾಹನವನ್ನು ಮೆ:ಕಾರ್ಪೊರೇಷನ್ ಬ್ಯಾಂಕ್, ಪೊನ್ನಂಪೇಟೆರವರಿಂದ ರೂ, 2,55,000.00 (ರೂಪಾಯಿ ಎರಡು ಲಕ್ಷ ದ ಐವತ್ತೈದು ಸಾವಿರ ಮಾತ್ರ)ಗಳ ಸಾಲ ಪಡೆದು ದಿನಾಂಕ:26.6.1999 ರಂದು ಅಗ್ರಿಮೆಂಟ್ ಆಗಿರುವುದಾಗಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಹಾಗೂ ವಾಹನದ ಬಗ್ಗೆ ಯಾವುದೇ ಆದೇಶ ಮಾಡಬಾರದೆಂದು ಬ್ಯಾಂಕ್ ನವರಿಗೆ ಸಾಲ ಮರುಪಾವತಿಸುವ ಬಗ್ಗೆ ಸಹಕರಿಸಬೇಕೆಂದು ತಿಳಿಸಿದ್ದಾರೆ. ಮತ್ತು ಸದರಿ ವಿಷಯವು ಈಗಾಗಲೇ ಸಿವಿಲ್ ನ್ಯಾಯಾಲಯ, ವಿರಾಜಪೇಟೆ 'ಒ.ಎಸ್.ನಂ:32:05 ರಲ್ಲಿ ಇರುವುದಾಗಿ ತಿಳಿಸಿದ್ದಾರೆ. ಆದರೆ ಈ ನ್ಯಾಯಾಲಯದಿಂದ ನಿಯಮ 43 (ಬಿ) ನೋಟೀಸ್‌ಗೆ ಸಮಂಜಸವಾದ ಉತ್ತರ ನೀಡಿರುವುದಿಲ್ಲ. ವಾಹನವು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವ ವಿಷಯ ಪೊಲೀಸ್ ಇಲಾಖೆ ದಾಖಲು ಮಾಡಿರುವ ವಿಷಯಗಳ ಬಗ್ಗೆ ಏನನ್ನು ಹೇಳಿರುವುದಿಲ್ಲ, ವಿರಾಜಪೇಟೆ ಸಿವಿಲ್ ನ್ಯಾಯಾಲಯದಲ್ಲಿ ದಾಖಲು ಆಗಿದ್ದು 'ಒ.ಎಸ್.ಸಂ:32:05 ಇದು 23.5.2005 ರಂದು ವಿಲೇ ಆಗಿರುತ್ತದೆ. ಸದರಿ ಒ.ಎಸ್.ಸಂ:32:05 ರಲ್ಲಿನ ಸಿವಿಲ್ ವ್ಯಾಜ್ಯವು ಕಾರ್ಪೊರೇಶನ್ ಬ್ಯಾಂಕ್ ಮತ್ತು ಪಳಂಗಪ್ಪ ಮತ್ತು ಚಂಗಪ್ಪ ಇವರಿಗೆ ಮಾತ್ರ ಸೀಮಿತವಾಗಿದೆ. ಹಾಗೂ ಅಬಕಾರಿ ಇಲಾಖೆ ಅಧಿಕಾರಿಗಳು ಇದರಲ್ಲಿ ಪಾರ್ಟಿಗಳಾಗಿರುವುದಿಲ್ಲ ಮತ್ತು ಸದರಿ ನ್ಯಾಯಾಲಯದಿಂದ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧಿಕಾರಿ, ಕೊಡಗು ಇವರಿಗೆ ಯಾವುದೇ ಆದೇಶ ಕಂಡು ಬರುವುದಿಲ್ಲ.

ಸದರಿ ಪ್ರಕರಣದಲ್ಲಿ ತನಿಖಾಧಿಕಾರಿಗಳ ಮತ್ತು ಮೊಕದ್ದಮೆ ದಾಖಲು ಮಾಡಿದ ಅಧಿಕಾರಿಗಳನ್ನು ಮತ್ತು ಮಹಜರು ಸಾಕ್ಷಿಗಳನ್ನು ದಿನಾಂಕ:6.2.2006 ರಂದು ವಿಚಾರಣೆ ನಡೆಸಲಾಗಿರುತ್ತದೆ. ವಾಹನದ ಮಾಲೀಕರಿಗೆ ದಿನಾಂಕ:22.2.2007 ರಂದು ವಿಚಾರಣೆಯನ್ನು ನಿಗದಿಪಡಿಸಲಾಯಿತು. ಆ ದಿನ ವಾಹನದ ಮಾಲೀಕರು ಮತ್ತು ಅವರ ಪರ ವಕೀಲರು ಹಾಜರಿದ್ದು, ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ಸಮಯಾವಕಾಶವನ್ನು ಕೋರಿರುತ್ತಾರೆ. ತದನಂತರ ದಿನಾಂಕ:3.7.2007, 10.7.2007 ರಂದು ವಿಚಾರಣೆಯನ್ನು ನಿಗದಿಪಡಿಸಿ ಸಮನ್ಸ್ ಜಾರಿಯಾಗಿರುತ್ತದೆ. ವಾಹನ ಮಾಲೀಕರು ಸದರಿ ದಿನಾಂಕಗಳಂದು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ.

ಈ ಕಾರಣದಿಂದ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದು, ಅಕ್ರಮ ಸಾರಾಯಿ ಸಾಗಾಣಿಕೆಯಂತಹ ಕೃತ್ಯದಲ್ಲಿ ಬಾಗಿಯಾಗಿದ್ದುದಾಗಿ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ಮತ್ತು ಸದರಿ ವಾಹನವನ್ನು ವಶಪಡಿಸಿಕೊಂಡು 2 ವರ್ಷಗಳು ಕಳೆದರೂ ವಾಹನದ ಮಾಲೀಕರು ಈ ನ್ಯಾಯಾಲಯದ ನಡವಳಿಗಳಿಗೆ ಸೂಕ್ತವಾಗಿ ಸಹಕರಿಸದೇ ಅನಗತ್ಯ ವಿಳಂಬ ಮಾಡುತ್ತಿದ್ದಾರೆ. ಸದರಿ ವಾಹನವು 1999 ರ ತಯಾರಿಕೆಯಾಗಿದ್ದು ತೆರೆದ ಪ್ರದೇಶದಲ್ಲಿ ಕಳೆದ ಎರಡು ವರ್ಷಗಳಿಂದ ನಿಂತಿದ್ದು, ಕೊಡಗು ಜಿಲ್ಲೆಯ ವಿಪರೀತ ಮಳೆ, ಗಾಳಿ ಪ್ರಕೃತಿಯ ವಿಕೋಪಕ್ಕೆ ಸಿಲುಕಿ ವಾಹನದ ಬಿಡಿಭಾಗಗಳು ತೀರ ತುಕ್ಕು ಹಿಡಿದು ಹಾಳಾಗಿದ್ದು, ಇನ್ನು ಹೆಚ್ಚು ಸಮಯ ಹೀಗೆ ಇದ್ದಲ್ಲಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗುತ್ತದೆ ಎಂಬ ಅಂಶಗಳನ್ನು ಪರಿಗಣಿಸಿ ವಾಹನದ ಮಾಲೀಕರು ಈ ನ್ಯಾಯಾಲಯದಿಂದ ನಿಯಮ 43(ಬಿ) ರನ್ವಯ ನೀಡಿದ ಕಾರಣ ಕೇಳಿ ನೋಟೀಸ್‌ಗೆ ಸೂಕ್ತ ಹಾಗೂ ಸಮಂಜಸವಾದ ಉತ್ತರಗಳನ್ನು ನೀಡಿಲ್ಲ ಎಂಬ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಈ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಇಎಕ್ಸ್‌ಇ:3.ಡಿಟಿಸಿಆರ್‌ಎಂ 119:2004–05 ದಿನಾಂಕ:10ನೇ ಜುಲೈ 2007**

ಹೆಚ್.ಎನ್. ಆನಂದ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 'ಬಿ' ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಆರಕ್ಷಕ ಉಪ ನಿರೀಕ್ಷಕರು, ನಾಪೋಕ್ಲು ಠಾಣೆ ಇವರ ಮೊ.ಸಂ:4:2005 ದಿ:18.1.2005 ಇದಕ್ಕೆ ಸಂಬಂಧಿಸಿದಂತೆ ಜಪ್ತುಪಡಿಸಲಾದ

ಮಹೇಂದ್ರ ಜೀಪು ಸಂ:ಕೆಎ–12–4453 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶ ದಿನಾಂಕ:10.7.2007 ರಂದು ಬೆರಳಚ್ಚು ಮಾಡಿಸಿ, ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ

ಪಿ.ಆರ್. 969

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ,**
**ಬಳ್ಳಾರಿ ಉಪವಿಭಾಗ–1, ಬಳ್ಳಾರಿ**

**ಪ್ರಕರಣದ ಸಂಖ್ಯೆ: ಕಾಅಬ:ಕಾನಪ:ಸಿಆರ್:211:07:270, ದಿನಾಂಕ:30ನೇ ಜೂನ್ 2007**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ಶ್ರೀಮತಿ. ಕೆ.ಎ. ಹೇಮಾವತಿ<br>ಗಂಡ:ಲೇಟ್. ಆಂಜನೇಯಲು,<br>ವಯಸ್ಸು 22 ವರ್ಷ<br>ವಾಸ: ಕೆ.ಹೆಚ್.ಬಿ. ಕಾಲೋನಿ<br>ಎಲ್ಐಜಿ–457, ಗಾಂಧಿನಗರ, ಮೋಕಾರೋಡ್<br>ಬಳ್ಳಾರಿ | | 1) ಎಸ್. ಕೊಂಡಪ್ಪ ನಾಯ್ಡು<br>ತಂದೆ:ಬಿ ಮಲಕೊಂಡಯ್ಯ<br>ಆಟೋ ಮಾಲೀಕರು,<br>ನಂ.ಎಪಿ–16:ಟಿಯು–7197 ಮಾಧುರಿ<br>ನರ್ಸಿಂಗ್‌ಹೋಂ ಹತ್ತಿರ ಬಳ್ಳಾರಿ<br>2) ಸುರೇಶ್‌ಕುಮಾರ್ ಚಲದವಾಡ<br>ಎಪಿ–16:ಟಿಯು–7197ರ ಪಾಲಸಿ ಹೋಡ್ರ,<br>ಶಿವಾಲಯಮ್ ಭವಾನಿ ಪುರಂ. ವಿಜಯವಾಡ<br>(ಎ.ಪಿ.)<br>3) ಡಿವಿಜನಲ್ ಮ್ಯಾನೇಜರ್, ಮೆ:ನ್ಯೂ ಇಂಡಿಯಾ<br>ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ಕೆ.ಎ. ಹೇಮಾವತಿ ಗಂ:ಲೇಟ್ ಆಂಜನೇಯಲು ಆದ ತಾನು ಮೃತ ಲೇಟ್ ಆಂಜನೇಯಲು ಇವರ ಪತ್ನಿ ಹಾಗೂ ಅವರ ಅವಲಂಬಿತರು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಆಂಜನೇಯಲು 1ನೇ ಪ್ರತಿವಾದಿಯವರ ಬಳಿಗೂಡ್ಸ್ ಆಟೋ ಸಂ:ಎಪಿ–16:ಟಿಯು–7197ರಲ್ಲಿ ಹೆಲ್ಪರ್ ಕಂ ಲೋಡರ್ ಆಗಿ ದಿನಾಂಕ:6–4–2007 ರಂದು ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ
ಉಪ ವಿಭಾಗ–1, ಬಳ್ಳಾರಿ

ಪಿ.ಆರ್. 950

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು:** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,
ಕೊಡಗು ಜಿಲ್ಲೆ ಮಡಿಕೇರಿ

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು ಉಪವಿಭಾಗ<br>ಸೋಮವಾರಪೇಟೆ | | ಪಾಷ, ತಂದೆ:ಅಬ್ದುಲ್ಲಾ<br>ಲಾರಿ ಚಾಲಕ, ಮ.ಸಂ:16<br>1ನೇ ಕ್ರಾಸ್, 2ನೇ ಮೈನ್<br>ಗೋರಿಪಾಳ್ಯ ಬೆಂಗಳೂರು. |

ದಿನಾಂಕ:20.7.1996 ರಂದು ಸೋಮವಾರಪೇಟೆ ಉಪವಿಭಾಗದ ಅಬಕಾರಿ ಉಪ ನಿರೀಕ್ಷಕರು ಹಾಗೂ ಕುಶಾಲನಗರ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಕುಶಾಲನಗರ ಉಪವಲಯದ ವ್ಯಾಪ್ತಿಯಲ್ಲಿ ರಾತ್ರಿ ಗಸ್ತು ನಡೆಸುತ್ತಿದ್ದಾಗ ರಾತ್ರಿ ಸುಮಾರು 10.30 ಗಂಟೆ ಸಮಯದಲ್ಲಿ ಮುಳ್ಳುಸೋಗೆ ಕೆರೆಯ ಪಕ್ಕದಲ್ಲಿ ಹಾಸನದ ಕಡೆಯಿಂದ ಕುಶಾಲನಗರದ ಕಡೆಗೆ ಬರುತ್ತಿದ್ದ ಟ್ಯಾಂಕರ್ ನಂ.ಸಿಎಎನ್-3677 ರನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಇದರಲ್ಲಿ ಅಂದಾಜು 12,000 ಲೀಟರ್ ಮದ್ಯಸಾರ ತುಂಬಿರುವುದು ಕಂಡು ಬಂದ ಕಾರಣ ಟ್ಯಾಂಕರ್ ನಲ್ಲಿ ಚಾಲಕನೊಬ್ಬ ಮಾತ್ರ ಇದ್ದು ಸದರಿ ಮದ್ಯಸಾರ ಸಾಗಾಣಿಕೆ ಬಗ್ಗೆ ರಹದಾರಿ ಪತ್ರ ವಗೈರೆ ಕೇಳಲಾಗಿ ಯಾವುದೂ ಇಲ್ಲವೆಂದು ಹೇಳಿದ ಕಾರಣ ಸದರಿ ಟ್ಯಾಂಕರ್ ಚಾಲಕ ಪಾಷ ತಂದೆ:ಅಬ್ದುಲ್ಲಾ, ಮನೆ ನಂ:16 1ನೇ ಮುಖ್ಯರಸ್ತೆ, ಗೋರಿಪಾಳ್ಯ ಬೆಂಗಳೂರು, ಇವರ ಮೇಲೆ ಸೋಮವಾರಪೇಟೆ ಉಪವಿಭಾಗದ ಉಪ ನಿರೀಕ್ಷಕರು ಪ್ರ.ವ.ವರದಿ ನಂ:3:96-97 ದಿನಾಂಕ:20.7.1996ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಸದರಿ ಟ್ಯಾಂಕರನ್ನು 12,000 ಲೀಟರ್ ಮದ್ಯಸಾರದ ಸಮೇತ ವಶಕ್ಕೆ ತೆಗೆದು ನಂತರ ಮುಂದಿನ ಸೂಕ್ತ ನಡವಳಿಗಾಗಿ ಕುಶಾಲನಗರ ಅಬಕಾರಿ ಉಪನಿರೀಕ್ಷಕರು, ಉಪವಲಯ ಇವರಿಗೆ ಟ್ಯಾಂಕರ್ ಮತ್ತು ಮದ್ಯಸಾರವನ್ನು ಸಂಬಂಧಪಟ್ಟ ಕಡತದೊಂದಿಗೆ ನೀಡಿರುತ್ತಾರೆ.

ತದನಂತರ ವಶಪಡಿಸಿಕೊಂಡ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗೆ ತೆಗೆದಿದ್ದ ಮಾದರಿಯನ್ನು ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರು ರಾಸಾಯನಿಕ ಕೇಂದ್ರ ಇಲ್ಲಿಗೆ ಕಳುಹಿಸಲಾಗಿದ್ದು, ಸಹಾಯಕ ರಾಸಾಯನಿಕ ತಜ್ಞರು ತಮ್ಮ ವರದಿ ದಿನಾಂಕ:24.7.1996 ಇದರಲ್ಲಿ ದ್ರವವು ಮದ್ಯಸಾರವೆಂದು ದೃಢಪಟ್ಟಿದ್ದು, ಮದ್ಯಸಾರದ ಸಾಂದ್ರತೆ ಶೇಕಡ 94:76 ಮತ್ತು 66 ಓ.ಪಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಹಿನ್ನಲೆಯಲ್ಲಿ ಸದರಿ ಮದ್ಯಸಾರವನ್ನು ಈ ಪ್ರಾಧಿಕಾರದ ದಿನಾಂಕ:13.9.1996ರ ಆದೇಶ ಸಂ:ಇಎಕ್ಸ್ಇ 3ಸಿಆರ್ಎಂ 179:96-97 ಇದರಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ನಂತರ ಸದರಿ ಮದ್ಯಸಾರವನ್ನು ಅಬಕಾರಿ ಆಯುಕ್ತರು, ಬೆಂಗಳೂರು ಇವರ ದಿನಾಂಕ:14.8.1996ರ ಆದೇಶ ಸಂ:ಇಸಿಇ 92:5:ಆರ್ಎಸ್ಎ 96 ಇದರಲ್ಲಿ ಮದ್ಯಸಾರವನ್ನು ಕುಶಾಲನಗರದಲ್ಲಿದ್ದ ಸಾರಾಯಿ ತಯಾರಿಕಾ ಘಟಕಕ್ಕೆ ವಿತರಿಸಿ ರೂ. 1,21,942.00 (ರೂಪಾಯಿ ಒಂದು ಲಕ್ಷದ ಇಪ್ಪತ್ತೊಂದು ಸಾವಿರದ ಒಂಬೈನೂರ ನಲವತ್ತೆರಡು ಮಾತ್ರ) ಚ.ನಂ.:77 ರಲ್ಲಿ ದಿನಾಂಕ:8.11.1996 ರಂದು ಎಸ್‌ಬಿಐ, ಮಡಿಕೇರಿಯಲ್ಲಿ ಸರಕಾರಕ್ಕೆ ಜಮಾ ಮಾಡಲಾಗಿರುತ್ತದೆ.

ದಿನಾಂಕ:27.7.1996ರಂದು ವಾಹನದ ಮಾಲೀಕರು ಅವರ ಪರ ವಕೀಲರಿಂದ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಬಿಡುಗಡೆಗೊಳಿಸಲು ಪ್ರಾರ್ಥಿಸಿದ್ದರು. ವಾಹನ ಮಾಲೀಕರಾದ ಶ್ರೀ ಎಂ. ರಮೇಶ, ತಂದೆ:ಮಲ್ಲಿಕ್‌ಶೆಟ್ಟಿ, ನಂ:148, ಮೈಸೂರು ರಸ್ತೆ, ಬೆಂಗಳೂರು-26 ಇವರಿಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43ಬಿ ರನ್ವಯ ದಿನಾಂಕ:2.8.1996ರಂದು ಕಾರಣ ಕೇಳಿ ನೋಟೀಸ್ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸ್‌ಗೆ ವಿವರಣೆಯನ್ನು ವಾಹನದ ಮಾಲೀಕರಾದ ಬಿ. ರಮೇಶ್ ರವರ ಜಿ.ಪಿ.ಎ. ರವರಾದ ಜಯರಾಮರೆಡ್ಡಿಯವರು ತಮ್ಮ ವಕೀಲರ ಮೂಲಕ 2.9.1996 ರಂದು ಈ ನ್ಯಾಯಾಲಯಕ್ಕೆ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸಿ ದಿನಾಂಕ:27.7.1996 ರಂದು ನೀಡಿದ ಉತ್ತರವನ್ನು ದಿನಾಂಕ:2.8.1996ರ ಕಾರಣ ಕೇಳಿ ನೋಟೀಸ್‌ಗೆ ಉತ್ತರವೆಂದು ಪರಿಗಣಿಸಬೇಕೆಂದು ಮತ್ತು ತಾನು ಅನಾರೋಗ್ಯಸ್ಥನಾಗಿದ್ದು, ತಮ್ಮದು ದೊಡ್ಡ ಕುಟುಂಬವಾಗಿದ್ದು, ಕುಟುಂಬದ ಜೀವನ ನಿರ್ವಹಣೆಗಾಗಿ ಒಂದು ಟ್ಯಾಂಕರನ್ನು ಒಬ್ಬ ಡ್ರೈವರ್ ನನ್ನು ನೇಮಿಸಿ ಬಾಡಿಗೆಗೆಂದು ಓಡಿಸಲು ಗಾಡಿಯನ್ನು ಚಾಲಕನ ವಶಕ್ಕೆ ನೀಡಲಾಗಿದ್ದು, ಅವನು ತನ್ನ ಗಮನಕ್ಕೆ ಬಾರದೇ ಇಂತಹ ಅಪರಾಧ ಮಾಡಿರುತ್ತಾರೆ. ತಾನು ಮೊಕದ್ದಮೆಯಲ್ಲಿ ಬಾಗಿಯಾಗಿರುವುದಿಲ್ಲ. ಆದುದರಿಂದ ವಾಹನವನ್ನು ಮಧ್ಯಂತರ ವಶಕ್ಕೆ ನೀಡಬೇಕಾಗಿ ಪ್ರಾರ್ಥಿಸಿದ್ದಾರೆ, ಸದರಿ ಅರ್ಜಿಯನ್ನು ಪರಿಗಣಿಸಿ ಈ ನ್ಯಾಯಾಲಯದಲ್ಲಿ ಆದೇಶ ಸಂ:ಇಎಕ್ಸ್ ಇ. 3 ಸಿಆರ್ಎಂ:179:1996-97 ದಿನಾಂಕ:24.9.1996ರಲ್ಲಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ಆದೇಶ ನೀಡಲಾಗಿರುತ್ತದೆ. ಸದರಿ ಆದೇಶದ ವಿರುದ್ಧ ಅರ್ಜಿದಾರರು ಮಡಿಕೇರಿಯ ಘನ ಸೆಶನ್ಸ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂ:53:96 ಅನ್ನು ದಾಖಲು ಮಾಡಿದ್ದರು. ಸದರಿ ಅಪೀಲನ್ನು ಘನ ಪ್ರಿನ್ಸಿಪಲ್ ಸೆಶನ್ಸ್ ಜಡ್ಜ್, ಮಡಿಕೇರಿ ದಿನಾಂಕ:15.3.1997 ರ ಆದೇಶ ನೀಡಿ ವಾಹನದ ಮೌಲ್ಯಕ್ಕೆ ಸಮನಾಗಿ ನಷ್ಟ ಪೂರೈಕೆ ಪ್ರಮಾಣ ಪತ್ರ ಹಾಗೂ ಸಾಲ್ವೆಂಟ್ ಸೆಕ್ಯೂರಿಟಿಯನ್ನು ನೀಡಿ ವಾಹನವನ್ನು ಷರತ್ತಿಗೆ ಒಳಪಡಿಸಿ ಬಿಡುಗಡೆ ಮಾಡಬೇಕೆಂದು ನಿರ್ಧರಿಸಿ ಅಪೀಲನ್ನು ವಿಲೇಗೊಳಿಸಿದೆ. ಈ ಹಿನ್ನಲೆಯಲ್ಲಿ ಈ ವಾಹನದ ಮಾರ್ಕೆಟ್ ಮೌಲ್ಯವನ್ನು ನಿಗದಿಪಡಿಸಲು ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು ಕೊಡಗು ಜಿಲ್ಲೆ ಮಡಿಕೇರಿರವರಿಗೆ ದಿನಾಂಕ:31.3.1997ರಲ್ಲಿ ಪತ್ರ ಬರೆದು ಕೋರಲಾಗಿತ್ತು. ಸದರಿ ಪತ್ರಕ್ಕೆ ಅನುಗುಣವಾಗಿ ಪ್ರಾದೇಶೀಕಾ ಸಾರಿಗೆ ಅಧಿಕಾರಿಗಳು ಕೊಡಗು ಜಿಲ್ಲೆ, ಮಡಿಕೇರಿ ಇವರು ತಮ್ಮ ದಿನಾಂಕ:10.4.1997ರ ಪತ್ರದಲ್ಲಿ ವಾಹನಕ್ಕೆ ರೂ. 1,15,000.00 (ರೂಪಾಯಿ ಒಂದು ಲಕ್ಷದ ಹದಿನೈದು ಸಾವಿರ ಮಾತ್ರ) ಗಳ ಮೌಲ್ಯವನ್ನು ನಿಗದಿಪಡಿಸಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಹಿನ್ನಲೆಯಲ್ಲಿ ವಾಹನದ ಮಾಲೀಕರು ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು ಇವರ ದಿನಾಂಕ:31.5.1997 ರ ದಿನಾಂಕದ ದಡೂತಿ ದೃಢೀಕರಣ ಪತ್ರ ಸಂ: 5:97-98 ಇವರಿಂದ ಪಡೆದ ರೂ. 1,00,000.00 (ರೂಪಾಯಿ ಒಂದು ಲಕ್ಷ ಮಾತ್ರ) ಮೌಲ್ಯದ ದೃಢೀಕರಣ ಪತ್ರ (ಶ್ರೀ ಟಿ.ಕೃಷ್ಣಮೂರ್ತಿ, ಬಿನ್ ಲೇಟ್: ಕೆ ತಿಮ್ಮಯ್ಯಶೆಟ್ಟಿ, ರಾಮಪುರ ಗ್ರಾಮರವರು ಹೊಂದಿರುವ ಸುಳೇರಿಪಾಳ್ಯ ಗ್ರಾಮದ ಸ.ನಂ:196ರಲ್ಲಿ 6.05 ಎಕರೆ ವಿಸ್ತೀರ್ಣದ ಜಮೀನಿನ)

ದಡೂತಿ ಶ್ಯೂರಿಟಿಯನ್ನು ದಿನಾಂಕ:13.6.1997 ರಂದು ಮತ್ತು ರೂಪಾಯಿ 25,000.00 (ರೂಪಾಯಿ ಇಪ್ಪತ್ತೈದು ಸಾವಿರ ಮಾತ್ರ)ಗಳನ್ನು ಸೆಕ್ಯೂರಿಟಿ ಡಿಪಾಸಿಟ್ 8443 ರಲ್ಲಿ ಚಲನ್ ನಂ:17 ರಲ್ಲಿ ದಿನಾಂಕ:20.6.1997 ರಂದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಮಡಿಕೇರಿ ಶಾಖೆಯಲ್ಲಿ ಸರ್ಕಾರಕ್ಕೆ ಜಮೆ ಮಾಡಿದ್ದಾರೆ. ಈ ಹಿನ್ನಲೆಯಲ್ಲಿ ದಿನಾಂಕ:20.6.1997 ರಂದು ವಾಹನವನ್ನು ಘನ ಸೆಶನ್ಸ್ ನ್ಯಾಯಾಲಯದ ದಿನಾಂಕ:15.3.97ರ ಆದೇಶದನ್ವಯ ವಾಹನದ ಮಾಲೀಕರ ವಶಕ್ಕೆ ನೀಡಲಾಗಿದೆ.

ವಾಹನದ ಮಾಲೀಕರು ವಾಹನವನ್ನು ಪಡೆದುಕೊಳ್ಳುವ ಸಮಯದಲ್ಲಿ ಸಲ್ಲಿಸಿದ ದಡೂತಿ ಪತ್ರದ ವಾಯಿದೆಯು 6 ತಿಂಗಳು ಮಾತ್ರ ಇದ್ದು, ಒಂದು ಬಾರಿ ಮಾತ್ರ ನವೀಕರಿಸಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. (ದ.ದೃ.ಪ. 34:97–98 ದಿನಾಂಕ:24.2.98 ತಹಶೀಲ್ದಾರ್,. ಕೊಳ್ಳೇಗಾಲ) ಸದರಿ ದಡೂತಿ ಪತ್ರದ ವಾಯಿದೆಯು 1998ರಲ್ಲಿ ಮುಗಿದಿದ್ದು, ತದನಂತರ ವಾಹನದ ಮಾಲೀಕರಿಗೆ ದಿನಾಂಕ:29.7.1998, 15.9.1998, 3.10.1998, 21.11.1998 ಹೀಗೆ ಹಲವಾರು ಬಾರಿ ನೋಂದಣಿ ಅಂಚೆ ಮೂಲಕ ಪತ್ರ ಬರೆದರೂ ವಾಯಿದೆ ಮೀರಿದ ಸಾಲ್ವೇನ್ಸಿ ದೃಢೀಕರಣ ಪತ್ರವನ್ನು ನವೀಕರಿಸಿ ಸಲ್ಲಿಸುವಂತೆ ಸೂಚಿಸಿದ್ದರೂ ಕೂಡ ನವೀಕರಿಸಿರುವುದಿಲ್ಲ ಮತ್ತು ಅವರು ದಿನಾಂಕ:13.6.1997ರಲ್ಲಿ ಸಲ್ಲಿಸಿರುವ ಪ್ರಮಾಣ ಪತ್ರದಲ್ಲಿ ದಡೂತಿ ಪ್ರಮಾಣ ಪತ್ರವನ್ನು ಕಾಲ ಕಾಲಕ್ಕೆ ವಿಸ್ತರಿಸುವುದಾಗಿ ತಿಳಿಸಿದ್ದರೂ ವಾಹನವನ್ನು ತಮ್ಮ ವಶಕ್ಕೆ ತೆಗೆದುಕೊಂಡ ನಂತರ ಅದನ್ನು ನವೀಕರಿಸದೇ ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣರಾಗಿದ್ದಾರೆ. ಸದರಿ ವಿಷಯದಲ್ಲಿ ದಡೂತಿ ದೃಢೀಕರಣ ಪತ್ರದ ಅವಧಿಯನ್ನು ವಿಸ್ತರಿಸಲು ತಹಶೀಲ್ದಾರ್, ಕೊಳ್ಳೇಗಾಲ ಇವರಿಗೆ ದಿನಾಂಕ:29.7.1998 ರಂದು ಪತ್ರ ಬರೆದಿದ್ದರೂ ತಹಶೀಲ್ದಾರ್ ರವರು ಈ ವಿಷಯದಲ್ಲಿ ಯಾವುದೇ ಕ್ರಮ ಜರುಗಿಸಿರುವುದಿಲ್ಲ ಇದಲ್ಲದೆ ತಹಶೀಲ್ದಾರ್ ಕೊಳ್ಳೇಗಾಲ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:28.2.2001 ರಂದು ವಿವರವಾದ ಪತ್ರ ಬರೆದು ಜಾಮೀನುದಾರರಾದ ಶ್ರೀ ಕೃಷ್ಣಮೂರ್ತಿ ಇವರು ಸುಳೇರಿಪಾಳ್ಯದ ಸ.ನಂ. 196 ರಲ್ಲಿರುವ 6.05 ಎಕರೆ ಜಮೀನನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು 1,00,000.00 ರೂ (ರೂಪಾಯಿ ಒಂದು ಲಕ್ಷ ಮಾತ್ರ)ಗಳನ್ನು ಅಬಕಾರಿ ಶೀರ್ಷಿಕೆಗೆ ಜಮಾ ಮಾಡಿ ವರದಿ ಸಲ್ಲಿಸಲು ಕೋರಲಾಗಿತ್ತು. ಸದರಿ ವಿಷಯದಲ್ಲಿ ತಹಶೀಲ್ದಾರ್ ಕೊಳ್ಳೇಗಾಲ ಇವರು ಯಾವುದೇ ಕ್ರಮ ಜರುಗಿಸಲಿಲ್ಲ. ಈ ಸಂಬಂಧದಲ್ಲಿ ವಾಹನದ ಮಾಲೀಕರಿಗೆ ಹಲವಾರು ಪತ್ರಗಳನ್ನು ಬರೆದು ವಾಹನವನ್ನು ಹಾಜರುಪಡಿಸಲು ತಿಳಿಸಿದರೂ ಕೂಡ ವಾಹನವನ್ನು ಹಾಜರುಪಡಿಸದೇ ನ್ಯಾಯಾಲಯದ ಆದೇಶಗಳನ್ನು ಹಾಗೂ ಅವರು ನೀಡಿರುವ ಪ್ರಮಾಣಪತ್ರಗಳ ಷರತ್ತುಗಳನ್ನು ಉಲ್ಲಂಘನೆ ಮಾಡಿರುತ್ತಾರೆ.

ಆದುದರಿಂದ ದಿನಾಂಕ:20.7.1999 ರಂದು ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು, ಬೆಂಗಳೂರು ಸೆಂಟ್ರಲ್ ಕೋರಮಂಗಲ, ಬೆಂಗಳೂರು–34 ಇವರಿಗೆ ವಾಹನವನ್ನು ವಶಪಡಿಸಿಕೊಳ್ಳಲು ಪತ್ರ ಬರೆಯಲಾಗಿತ್ತು. ಸದರಿ ಪತ್ರಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು ಇವರು ದಿನಾಂಕ:4.11.1999ರ ಪತ್ರ ಸಂ:ಪ್ರಾ.ಸಾ.ಅ.:ಬೆಂಗಳೂರು ಕೇಂದ್ರ:ಡಿಎಸ್‌ಎ:111:ಸಿಎಎಸ್:3677:99 ಇದರಲ್ಲಿ ಅಬಕಾರಿ ಕಾಯ್ದೆಯಡಿ ಎಸಗಬಹುದಾದ ಅಪರಾಧಗಳಿಗೆ ಮೋಟಾರು ವಾಹನ ನಿರೀಕ್ಷಕರಿಗೆ ವಾಹನವನ್ನು ವಶಪಡಿಸಿಕೊಳ್ಳಲು ಅಧಿಕಾರ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಹಾಗೂ ಅಬಕಾರಿ ಇಲಾಖೆಯ ಅಧಿಕಾರಿಗಳಿಗೆ ಸೂಕ್ತ ನೆರವು ನೀಡಿ ವಾಹನವನ್ನು ವಶಪಡಿಸಿಕೊಳ್ಳಲು ಸಹಕರಿಸುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ದಿನಾಂಕ:22.11.1999 ರಂದು ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ಪತ್ರ ಬರೆಯಲಾಗಿದ್ದು,. ಸದರಿಯವರು ಮತ್ತೆ ಪುನಃ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.11.1999 ರಂದು ಪತ್ರ ಬರೆದಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶ್ರೀ ಹೆಚ್.ವಿ. ವೆಂಕಟೇಶ್, ಮೋಟಾರು ವಾಹನ ನಿರೀಕ್ಷಕರು ಇವರಿಗೆ ನಿರ್ದೇಶಿಸಿ ಅಬಕಾರಿ ನಿರೀಕ್ಷಕರಿಗೆ ವಾಹನವನ್ನು ಪತ್ತೆ ಹಚ್ಚುವ ಬಗ್ಗೆ ಸಹಕರಿಸಲು ನಿರ್ದೇಶಿಸಿರುತ್ತಾರೆ. ಈ ಹಿನ್ನಲೆಯಲ್ಲಿ ಅಬಕಾರಿ ನಿರೀಕ್ಷಕರಾದ ಶ್ರೀ ಸಣ್ಣ ಕರಿಯಪ್ಪ ಮತ್ತು ಶ್ರೀ ಹೆಚ್.ವಿ ವೆಂಕಟೇಶ್ ಮೋಟಾರು ವಾಹನ ನಿರೀಕ್ಷಕರು ಇವರು ಜೊತೆ ಗೂಡಿ ವಾಹನವನ್ನು ಮಧ್ಯಂತರಿಕವಾಗಿ ಪಡೆಯುವ ಸಮಯದಲ್ಲಿ ಮಾಲೀಕರು ನೀಡಲಾದ ವಿಳಾಸ, ನಂಬರ್ 148, ಮೈಸೂರು ರಸ್ತೆ, ಬೆಂಗಳೂರು ಎಂಬಲ್ಲಿಗೆ ಸದರಿ ವಿಳಾಸವನ್ನು ವಿಚಾರಿಸಲಾಗಿ, ನಂ:148 ಎಂಬುವುದು ಖಾಲಿ ನಿವೇಶನವಾಗಿದ್ದು, ತೀರಾ ಸುಳ್ಳು ವಿಳಾಸವನ್ನು ನೀಡಿರುವುದಾಗಿ ಮತ್ತು ಸದರಿ ವಿಳಾಸವನ್ನು ಪತ್ತೆಹಚ್ಚಲು ಸಾಧ್ಯವಿಲ್ಲವಾಗಿ ಅಬಕಾರಿ ನಿರೀಕ್ಷಕರು ಮತ್ತು ಮೋಟಾರು ವಾಹನ ನಿರೀಕ್ಷಕರು ಹೇಳಿಕೆಯೊಂದನ್ನು ತಯಾರಿಸಿ 3.4.2000 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ತದನಂತರ ವಾಹನದ ಮಾಲೀಕರಿಗೆ ಬರೆದ ಎಲ್ಲಾ ಪತ್ರಗಳು ನೋಂದಣಿ ಅಂಚೆ ಮೂಲಕ ರವಾನಿಸಲಾಗಿದ್ದರೂ ಕೂಡ ಪತ್ರಗಳು ಸ್ವೀಕೃತವಾಗದೇ ವಾಪಾಸ್ಸು ಬಂದಿರುತ್ತದೆ. ಈ ನ್ಯಾಯಾಲಯದಲ್ಲಿ ಮಹಜರು ಸಾಕ್ಷಿಗಳಾದ ಶ್ರೀ ಪಿ.ಬಿ. ದೇವಯ್ಯ ಅಬಕಾರಿ ರಕ್ಷಕ, ಸೋಮವಾರಪೇಟೆ ಸಂಚಾರಿ ದಳ, ಜಲಸ್‌ಪಿಂಟೋ ಅಬಕಾರಿ ರಕ್ಷಕರು, ಸಂಚಾರಿ ದಳ, ಸೋಮವಾರಪೇಟೆ ಎಂ.ಎ. ಕುಶಾಲ್‌ಪ್ಪ, ಅಬಕಾರಿ ರಕ್ಷಕರು, ಕುಶಾಲನಗರ ಉಪವಲಯ, ಶ್ರೀ ಚಿಣ್ಣಪ್ಪ ಅಬಕಾರಿ ಉಪ ನಿರೀಕ್ಷಕರು, ಕುಶಾಲನಗರ ಉಪವಲಯ ಇವರುಗಳನ್ನು ದಿನಾಂಕ:3.4.1997 ರಂದು ವಿಚಾರಣೆ ನಡೆಸಲಾಗಿರುತ್ತದೆ. ಹಾಗೂ ಮೊಕದ್ದಮೆ ದಾಖಲು ಮಾಡಿದ ಅಧಿಕಾರಿಗಳಾದ ಶ್ರೀ ಜಿ.ಎ. ಗೋವಿಂದ, ಅಬಕಾರಿ ಉಪ ನಿರೀಕ್ಷಕರು, ಸಂಚಾರಿ ದಳ, ಸೋಮವಾರಪೇಟೆ ಇವರನ್ನು ದಿನಾಂಕ:17.4.1997 ರಂದು ವಿಚಾರಣೆ ನಡೆಸಲಾಗಿರುತ್ತದೆ. ಮತ್ತು ಸದರಿ ಅಧಿಕಾರಿಯು ದಿನಾಂಕ:30.6.2007ರಂದು ನಿವೃತ್ತಿ ಹೊಂದಿರುತ್ತಾರೆ. ವಾಹನದ ಮಾಲೀಕರಿಗೆ ವಾಹನದೊಂದಿಗೆ ದಿನಾಂಕ:28.12.2006, 25.1.2007, 15.2.2007, ಮತ್ತು 10.7.2007 ರಂದು ಹಾಜರಾಗಲು ನೋಟೀಸ್ ನೀಡಿದ್ದರೂ ಹಾಜರಾಗದೇ ಘನ ಸೆಶನ್ಸ್

ನ್ಯಾಯಾಲಯದ ಆದೇಶವನ್ನು ಪಾಲಿಸದೇ ಹಾಗೂ ಅವರು ನೀಡಿದ ಪ್ರಮಾಣ ಪತ್ರದಂತೆ ನಡೆದುಕೊಳ್ಳಲು ವಿಫಲರಾಗಿ ಈ ನ್ಯಾಯಾಲಯದ ನಡುವಳಿಗೆ ಸೂಕ್ತವಾಗಿ ಸಹಕರಿಸದೇ ಉದ್ದೇಶಪೂರ್ವಕವಾಗಿ ವಿಳಂಬ ಮಾಡುತ್ತಿರುತ್ತಾರೆ. ಹಾಗೂ 10 ವರ್ಷಗಳ ಸಮಯವನ್ನು ಹಾಳು ಮಾಡಿದ್ದಾರೆ. ಇದರಿಂದ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೇ ಅಕ್ರಮ ಮದ್ಯಸಾರ ಸಾಗಾಣಿಕೆಯಲ್ಲಿ ಬಾಗಿಯಾಗಿದ್ದಾರೆಂದು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುವುದು ಕಂಡು ಬಂದಿದೆ. ಸರ್ಕಾರದ ರಾಜಸ್ವದ ಹಿತದೃಷ್ಟಿಯಿಂದ ಸದರಿಯವರು ಆರ್.ಡಿ. ಖಾತೆಯಲ್ಲಿಡಲಾದ ರೂ. 25,000.00 (ರೂಪಾಯಿ ಇಪ್ಪತ್ತೈದು ಸಾವಿರ ಮಾತ್ರ)ವನ್ನು ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ತಹಶೀಲ್ದಾರ್, ಕೊಳ್ಳೇಗಾಲ ಇವರು ತಮ್ಮ ದಡೂತಿ ದೃಢೀಕರಣ ಪತ್ರದಲ್ಲಿ ನಮೂದಿಸಿರುವ ಜಾಮೀನುದಾರರಾದ ಶ್ರೀ ಕೃಷ್ಣಮೂರ್ತಿ ಇವರ ಸುಳೇರಿಪಾಳ್ಯ ಗ್ರಾಮದ ಸರ್ವೆ ನಂ 196 ರಲ್ಲಿರುವ 6.05 ಎಕರೆ ಜಮೀನನ್ನು ಸರ್ಕಾರಕ್ಕೆ ಭೂ ಕಂದಾಯ ಕಾಯ್ದೆಯನ್ವಯ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿದೆ ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ 174:96–97, ದಿನಾಂಕ: 10ನೇ ಜುಲೈ 2007**

ಹೆಚ್.ಎನ್. ಆನಂದ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 'ಬಿ' ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ಉಪವಿಭಾಗ ಇವರ ಮೊಕದ್ದಮೆ ಸಂ:4:96–97 ದಿನಾಂಕ:20.7.1996 ಇದಕ್ಕೆ ಸಂಬಂಧಿಸಿದಂತೆ ಆರ್.ಡಿ. ಖಾತೆಯಲ್ಲಿರುವ ರೂ. 25,000.00 (ರೂಪಾಯಿ ಇಪ್ಪತ್ತೈದು ಸಾವಿರ ಮಾತ್ರ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸದರಿ ಹಣವನ್ನು ಅಬಕಾರಿ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಳ್ಳಲು ಹಾಗೂ ಜಾಮೀನುದಾರರಾದ ಶ್ರೀ ಕೃಷ್ಣಮೂರ್ತಿ, ತಂದೆ:ಲೇಟ್: ತಿಮ್ಮಯ್ಯ ಶೆಟ್ಟಿ, ಸುಳೇರಿಪಾಳ್ಯ, ರಾಮಪುರ ಗ್ರಾಮ. ಕೊಳ್ಳೇಗಾಲ ತಾಲ್ಲೂಕು ಸುಳೇರಿಪಾಳ್ಯದ ಗ್ರಾಮದ ಸರ್ವೆ ನಂ:196 ರಲ್ಲಿ 6.05 ಎಕರೆ ಜಮೀನನ್ನು ಭೂ ಕಂದಾಯ ಕಾಯ್ದೆಯಡಿ ನಿಯಮಾನುಸಾರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ದಿನಾಂಕ:10.7.2007 ರಂದು ಬೆರಳಚ್ಚು ಮಾಡಿಸಿ, ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಪಿ.ಆರ್. 1018 ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು:** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,
ಕೊಡಗು ಜಿಲ್ಲೆ ಮಡಿಕೇರಿ

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು<br>ಪೊನ್ನಂಪೇಟೆ ಠಾಣೆ | | 1) ಪಿ.ಎಸ್. ಮನು, ಕಾರು ಚಾಲಕ<br>ತಂದೆ: ಸೋಮಯ್ಯ, ಅಮ್ಮತ್ತಿ ಗ್ರಾಮ<br>ಬಿಳುಗುಂದ<br>2) ವಿ.ಎಸ್. ವಿನಯ್<br>ತಂದೆ ಶಿವರಾಮನ್ ವಡನೇರಿ ಹೌಸ್, ಎಡಲೆವುತ್ತಿ,<br>ಕುಟ್ಟಮಂಗಲ ಅಂಚೆ, ಕೂಡಗಲೂರು ತಾ: ತ್ರಿಚೂರು<br>ಜಿಲ್ಲೆ,<br>ಕೇರಳ ರಾಜ್ಯ<br>3) ಕೆ.ಎಸ್. ಕುಶಾಲಪ್ಪ ತಂದೆ:ಲೇಟ್:ಸುಬ್ಬಯ್ಯ<br>ಬಿಳೂರು ಗ್ರಾಮ, ಪೊನ್ನಂಪೇಟೆ ಅಂಚೆ,<br>ವಿರಾಜಪೇಟೆ. |

**ಪ್ರಕರಣದ ಮುಖ್ಯಾಂಶಗಳು:**

ಆರಕ್ಷಕ ಉಪ ನಿರೀಕ್ಷಕರು, ಪೊನ್ನಂಪೇಟೆ ಠಾಣೆ ಇವರು ದಿನಾಂಕ: 1–4–2001 ರಂದು ಸಮಯ ಸುಮಾರು 1.00 ಗಂಟೆಯಲ್ಲಿ ಬಂದ ದೂರವಾಣಿ ಕರೆಯಂತೆ ಒಂದು ಕಪ್ಪು ಬಣ್ಣದ ಕಾರ್ ನಂ:ಎಂವೈಜಡ್–3654ರಲ್ಲಿ 2 ಜನರು

ಸೇಂದಿಯನ್ನು ಮಾರಾಟ ಮಾಡಿಕೊಂಡು ಬರುತ್ತಿದ್ದಾರೆಂದು ಬಂದಿರುವ ಖಚಿತ ವರ್ತಮಾನದ ಮೇರೆಗೆ ಅಲ್ಲಿಯ ಸ್ಥಳದವರನ್ನೇ ಪಂಚಾಯಿತಿದಾರರನ್ನಾಗಿ ಮಾಡಿಕೊಂಡು ಅವರಿಗೆ ವಿಷಯ ತಿಳಿಸಿ ಸಿಬ್ಬಂದಿಯವರೊಂದಿಗೆ ಕಾನೂರು ಕಡೆಗೆ ಹೋಗಿ ಬೆಕ್ಕೆಸೊಡ್ಲೂರು ಗ್ರಾಮದ, ಬೆಸಗೂರು ಕಡೆಗೆ ಹೋಗುವ ಜಂಕ್ಷನ್ ಕಡೆಗೆ ಮೇಲ್ಕಂಡ ಕಾರು ಬರುತ್ತಿರುವುದನ್ನು ಕಾದು ನಿಂತಿರುವಾಗ ಸುಮಾರು 1.00ಗಂಟೆಯ ಸಮಯದಲ್ಲಿ ಒಂದು ಕಪ್ಪು ಬಣ್ಣದ ಕಾರು ಸಂ:ಎಂವೈಜಡ್–3654 ಬರುತ್ತಿದ್ದು ಅದನ್ನು ತಡೆದು ನಿಲ್ಲಿಸಿ, ಚಾಲಕನ ಹೆಸರು, ವಿಳಾಸ ಕೇಳಲಾಗಿ ಪಿ.ಎಸ್. ಮನು, ತಂದೆ:ಸೋಮಯ್ಯ ಅಮ್ಮತ್ತಿ ಗ್ರಾಮ, ಎಂದೂ ಸುಳುಗೋಡು ಗ್ರಾಮದ ಕಾಂಡೇರ ಸುರೇಶ ಇವರ ಮನೆಯಲ್ಲಿ ಕಾರಿನ ಚಾಲಕ ಎಂದೂ ತಿಳಿಸಿರುತ್ತಾನೆ. ಇನ್ನೊಬ್ಬ ಅಸಾಮಿಯಾದ ವಿ.ಎಸ್. ವಿಜಯ, ತಂದೆ:ಶಿವರಾಮನ್, ವಡನೇರಿ ಹೌಸ್ ಎಡಲೇವೃತ್ತಿ, ಕುಟ್ಟಮಂಗಲ ಅಂಚೆ, ಕೂಡಗಲೂರು ತಾ: ತ್ರಿಚೂರು ಜಿಲ್ಲೆ, ಕೇರಳ ರಾಜ್ಯ ಮತ್ತು ಹಾಲಿ ವಾಸ ಕಾಂಡೇರ ಸುರೇಶರವರಲ್ಲಿ ಸೇಂದಿ ವ್ಯಾಪಾರ ಎಂದು ತಿಳಿಸಿದ್ದು, ಸೇಂದಿ ವ್ಯಾಪಾರದ ಕೆಲಸ ಎಂದು ತಿಳಿಸಿದ ಮೇರೆಗೆ ಅವರ ಎದುರಿನಲ್ಲಿ ಕಾರಿನ ಹಿಂಭಾಗದ ಡಿಕ್ಕಿ ತೆಗೆಸಿ ನೋಡಲಾಗಿ 3 ಪ್ಲಾಸ್ಟಿಕ್ ಕ್ಯಾನ್‌ಗಳಿದ್ದು, ಒಂದು ಆಕಾಶ ನೀಲಿ ಬಣ್ಣದ ಕ್ಯಾನ್‌ಗೆ ಕೆಂಪು ಮುಚ್ಚಳ ಹಾಕಿದ್ದು, ಅದನ್ನು ತೆರೆದು ನೋಡಲಾಗಿ ಸೇಂದಿ ರೀತಿಯ ಘಾಟು ವಾಸನೆ ಬರುತ್ತಿದ್ದು, ಇನ್ನೊಂದು ಕ್ಯಾನ್ 35 ಲೀ. ಹಿಡಿಯುವ ಕ್ಯಾನ್‌ನಲ್ಲಿ ಸುಮಾರು 5 ಲೀಟರ್‌ನಷ್ಟು ಸೇಂದಿ ಇದ್ದು, ಇನ್ನೊಂದು ಕ್ಯಾನ್‌ನಲ್ಲಿ 20 ಲೀಟರ್ ನಷ್ಟು ಸೇಂದಿ ಇದ್ದು, ಘಾಟು ವಾಸನೆ ಇರುವುದು ಕಂಡು ಬಂದಿರುತ್ತದೆ. ಪಂಚರ ಸಮಕ್ಷಮ ಪರಿಶೀಲನೆ ಮಾಡಲಾಗಿ, ಸೇಂದಿ ಎಂದು ತಿಳಿಸಿರುತ್ತಾರೆ. ಸದರಿ ಸೇಂದಿಯಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ಉಳಿದ ಸೇಂದಿಯನ್ನು ಪಂಚರ ಸಮಕ್ಷಮ ನಾಶಪಡಿಸಲಾಗಿರುತ್ತದೆ. ಮಾದರಿ ತೆಗೆದ ಸೇಂದಿಯನ್ನು ಹಾಗೂ 3 ಕ್ಯಾನ್‌ಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಸದರಿ ಸೇಂದಿಯ ಬಗ್ಗೆ ವಿಚಾರಿಸಿದಾಗ ಕಾಂಡೇರ ಸುರೇಶ ರವರ ಬಾಬ್ತು ತೋಟದಲ್ಲಿ ತೆಂಗಿನ ಮರಕ್ಕೆ ಸೇಂದಿ ಇಳಿಸುವ ಕ್ರಮವನ್ನು ಮಾಡಿದ್ದು, ಪ್ರತಿದಿನ ಸೇಂದಿಯನ್ನು ಈ ಕಾರಿನಲ್ಲಿ ತುಂಬಿಸಿಕೊಂಡು ಬಾಳೆಲೆ, ಕಾನೂರು, ಬೆಕ್ಕೆಸೊಡ್ಲೂರು ಗ್ರಾಮಕ್ಕಾಗಿ ಪೊನ್ನಂಪೇಟೆ ಕಡೆಗೆ ಬಂದು ಯಾರಿಗೂ ತಿಳಿಯದಂತೆ ಅಲ್ಲಲ್ಲಿ ಜನರಿಗೆ ಒಂದು ಬಾಟಲಿಗೆ 30.00 ರೂ. ನಂತೆ ಮಾರಾಟ ಮಾಡುತ್ತಿದ್ದುದ್ದಾಗಿ ಹಾಗೂ ಇದರ ಬಗ್ಗೆ ಯಾವುದೇ ಸರಕಾರದ ಪರವಾಗಿ ಇಲ್ಲವೆಂದು ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ತಿಳಿಸಿರುತ್ತಾರೆ. ಈ ರೀತಿಯ ಅಕ್ರಮ ಸಾಗಾಣಿಕೆ ಮಾಡುತ್ತಿರುವುದು ಅಬಕಾರಿ ಕಾಯ್ದೆ 32,34 ಹಾಗೂ 43(ಎ) ರೀತ್ಯಾ ಕಾನೂನಿಗೆ ವಿರೋಧವಾದ್ದರಿಂದ ಅಂಬಾಸಿಡರ್ ಕಾರ್ ಸಂ:ಎಂವೈಜಡ್ 3654 ಮತ್ತು ಸೊತ್ತುಗಳನ್ನು ವಶಪಡಿಸಿಕೊಂಡು ಮುಂದಿನ ತನಿಖೆಯ ಬಗ್ಗೆ ಅಂದಿನ ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ:11.4.2001ರಂದು ವಾಹನದ ಮಾಲೀಕರ ಪರವಾಗಿ ಅವರ ವಕೀಲರಿಂದ ನಿಯಮ 43(ಬಿ) ರನ್ವಯ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ವಶಪಡಿಸಿಕೊಳ್ಳಲಾದ ವಾಹನದ ಮೌಲ್ಯವನ್ನು ತಿಳಿಯಲು ಈ ಕಛೇರಿಯಿಂದ ದಿನಾಂಕ:7.2.2002 ರಂದು ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆದು ವಾಹನಕ್ಕೆ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗದಿಪಡಿಸಿಕೊಡಲು ಕೋರಲಾಗಿತ್ತು. ಈ ಹಿನ್ನಲೆಯಲ್ಲಿ ವಾಹನಕ್ಕೆ ರೂ. 10,500–00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ) ಬೆಲೆಯನ್ನು ನಿಗದಿಪಡಿಸಿ ದಿನಾಂಕ:7.2.2002 ರಂದು ದೃಢೀಕರಣ ಪತ್ರ ನೀಡಿರುತ್ತಾರೆ.

ದಿನಾಂಕ:26.2.2002 ರಂದು ವಾಹನದ ಮಾಲೀಕರು ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ) ಗೆ ಸಮನಾದ 3 ವರ್ಷ ಅವಧಿಯುಳ್ಳ ಬ್ಯಾಂಕ್ ಗ್ಯಾರಂಟಿಯನ್ನು ಕೆನರಾ ಬ್ಯಾಂಕ್, ಗೋಣಿಕೊಪ್ಪ ಶಾಖೆ ಇವರಿಂದ ಪಡೆದು ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ ವಾಹನ ಮಾಲೀಕರ ಪರವಾಗಿ ಅವರ ವಕೀಲರು ಸಲ್ಲಿಸಿದ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ದಿನಾಂಕ:4.3.2002 ರಂದು ಪರಿಗಣಿಸಿ ಆದೇಶವನ್ನು ನೀಡಿ ಷರತ್ತುಗಳೊಂದಿಗೆ ವಾಹನವನ್ನು ಮಾಲೀಕರ ವಶಕ್ಕೆ ಬಿಡುಗಡೆಗೊಳಿಸಲಾಗಿರುತ್ತದೆ.

ಈ ಮೊಕದ್ದಮೆಗೆ ಸಂಬಂಧಿಸಿ ವಶಪಡಿಸಿಕೊಂಡ ಸೇಂದಿಯಿಂದ ರಾಸಾಯನಿಕ ಪರೀಕ್ಷೆಗಾಗಿ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರು ಇವರಲ್ಲಿಗೆ ದಿನಾಂಕ:11.6.01 ರಂದು ಕಳುಹಿಸಲಾಗಿದ್ದು, ಅವರ ವರದಿ ದಿನಾಂಕ:20.6.2001ರ ಪ್ರಕಾರ ಸದರಿ ಸೇಂದಿಯಲ್ಲಿ 2.12ಶೇ. ಮದ್ಯಸಾರ ಅಂಶವಿರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಹಿನ್ನಲೆಯಲ್ಲಿ ಈ ನ್ಯಾಯಾಲಯದಿಂದ ದಿನಾಂಕ:22.12.2005 ರಂದು ಆದೇಶ ನೀಡಿ ವಶಪಡಿಸಿಕೊಳ್ಳಲಾದ ಸೇಂದಿಯನ್ನು ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲಾಗಿದೆ.

ದಿನಾಂಕ:16.2.2006ರಲ್ಲಿ ಸರ್ಕಾರದ ಸಹಾಯಕ ಅಭಿಯೋಗ ನಿರ್ದೇಶಕರು ಇವರಿಂದ ಮುಖ್ಯ ವಿಚಾರಣೆಯನ್ನು ಪ್ರಾರಂಭಿಸಿ ತನಿಖಾಧಿಕಾರಿಗಳಾದ ಶ್ರೀ ಕೆ.ಕೆ. ಉತ್ತಪ್ಪ, ಸಹಾಯಕ ಪೋಲಿಸ್ ಉಪನಿರೀಕ್ಷಕರು ಇವರಿಂದ ಹೇಳಿಕೆ ಪಡೆಯಲಾಗಿರುತ್ತದೆ. ಆದರೆ ವಾಹನದ ಮಾಲೀಕರು ಅಂದಿನಿಂದ ಇಂದಿನವರೆಗೂ ಅಂದರೆ ದಿನಾಂಕ:16.2.2006, 13.4.2006, 11.5.2006, 1.2.2007, 15.2.2007, 5.4.2007, 22.6.2007 ಈ ದಿನಾಂಕಗಳಲ್ಲಿ ವಿಚಾರಣೆ ನಿಗದಿಪಡಿಸಿ ನೋಟೀಸ್ ನೀಡಲಾಗಿತ್ತು.. ಆದರೆ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಹಾಗೂ ವಾಹನವನ್ನು ಹಾಜರು ಪಡಿಸಿರುವುದಿಲ್ಲ.

ಮಧ್ಯಂತರಿಕವಾಗಿ ಬಿಡುಗಡೆ ಪಡೆಯುವ ಸಮಯದಲ್ಲಿ ನೀಡಲಾದ ಬ್ಯಾಂಕ್ ಗ್ಯಾರಂಟಿಯ ಅವಧಿಯು ದಿನಾಂಕ:26.2.2007ಕ್ಕೆ ಮುಕ್ತಾಯವಾಗಲಿದ್ದು, ವಾಯಿದೆಯನ್ನು ವಿಸ್ತರಿಸಲು ಸಂಬಂಧಪಟ್ಟ ಬ್ಯಾಂಕ್ ಮ್ಯಾನೇಜರಿಗೂ ದಿನಾಂಕ:24.1.2007 ರಂದು ಪತ್ರ ಬರೆಯಲಾಗಿತ್ತು. ಆದರೂ ಕೂಡ ವಾಹನದ ಮಾಲೀಕರು ಬ್ಯಾಂಕ್‌ನವರೊಂದಿಗೆ ಸಹಕರಿಸದ ಹಾಗೂ ಅಲ್ಲಿಗೂ ಭೇಟಿ ನೀಡಿ ವ್ಯವಹರಿಸದಿದ್ದ ಕಾರಣ ದಿನಾಂಕ:24.1.2007ರ ಈ ನ್ಯಾಯಾಲಯದ ಪತ್ರಕ್ಕೆ ಅನುಗುಣವಾಗಿ ಬ್ಯಾಂಕ್ ಗ್ಯಾರಂಟಿ ಹಣ ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ)ಗಳ ಡಿ.ಡಿ.ಯನ್ನು ದಿ:27.2.2007ರ ಪತ್ರದೊಂದಿಗೆ ಈ ನ್ಯಾಯಾಲಯಕ್ಕೆ ಕಳುಹಿಸಿದ್ದು. ಸದರಿ ಹಣವನ್ನು ನಗದೀಕರಿಸಿ ದಿನಾಂಕ:14.3.2007ರಂದು ರೆವಿನ್ಯೂಖಾತೆಯಲ್ಲಿ ಇಡಲಾಗಿರುತ್ತದೆ.

ವಾಹನದ ಮಾಲೀಕರು ಈ ನ್ಯಾಯಾಲಯಕ್ಕೂ ಹಾಜರಾಗದೇ ವಾಹನವನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ದಿನಾಂಕ:4.3.2002ರ ಮಧ್ಯಂತರ ಆದೇಶವನ್ನು ಪಾಲಿಸದೇ ಉಲ್ಲಂಘಿಸಿರುತ್ತಲೇ ಬಂದಿರುವ ಕಾರಣ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೆ ಅಕ್ರಮ ಸೇಂದಿ ಸಾಗಾಟ ಮತ್ತು ಮಾರಾಟ ಕೃತ್ಯದಲ್ಲಿ ಬಾಗಿಯಾಗಿರುವುದಾಗಿ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ವಾಹನವನ್ನು ವಶಪಡಿಸಿಕೊಂಡು ಸುಮಾರು6 ವರ್ಷಗಳು ಕಳೆದರೂ ವಾಹನದ ಮಾಲೀಕರು ಅಂದಿನಿಂದಲೂ ನ್ಯಾಯಾಲಯದಲ್ಲಿ ಪ್ರಕರಣವನ್ನು ವಿಲೇಗೊಳಿಸಲು ಸಹಕರಿಸದೇ ಅನಗತ್ಯ ಕಾಲ ವಿಳಂಬ ಮಾಡುತ್ತಲೇ ಬಂದಿರುತ್ತಾರೆ. ಸದರಿ ಅಂಬಾಸಿಡರ್ ಕಾರ್ ಸಂ:ಎಂವೈಜಡ್ 3654ರ ವಾಹನವು 1977ರ ನೋಂದಣಿಯಾಗಿದ್ದು, ಈಗಾಗಲೇ 30 ವರ್ಷ ಕಳೆದಿರುತ್ತದೆ. ಅಲ್ಲದೆ ಪೆಟ್ರೋಲ್ ಚಾಲಿತ ಯಂತ್ರವಾಗಿದ್ದು, ಸದರಿ ವಾಹನದ ಮೌಲ್ಯ ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ) ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರು ದಿನಾಂಕ:7.2.2002ರ ಪತ್ರದಲ್ಲಿ ಈಗಾಗಲೇ ನಿಗದಿಪಡಿಸಿರುವುದರಿಂದ ಸದರಿ ವಾಹನವನ್ನು ಹರಾಜು ಮಾಡಿದರೂ ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ)ಕ್ಕಿಂತ ಹೆಚ್ಚು ಬೆಲೆ ಬರಲಾರದೆಂದು ಪರಿಗಣಿಸಿ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಆರ್.ಡಿ. ಖಾತೆಯಲ್ಲಿರುವ ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ)ಗಳನ್ನು ಅಂಬಾಸಿಡರ್ ಕಾರಿನ ಮೌಲ್ಯಕ್ಕೆ ಸಮನಾದುದೆಂದು ಪರಿಗಣಿಸಿ ಮುಟ್ಟುಗೋಲು ಹಾಕಿಕೊಂಡು ಸದರಿ ಹಣವನ್ನು ಅಬಕಾರಿ ಲೆಕ್ಕ ಶೀರ್ಷಿಕೆ:0039–00–15–0000 ಇದಕ್ಕೆ ಹೊಂದಾಣಿಕೆ ಮಾಡಿಕೊಳ್ಳುವುದು ಮತ್ತು ಪ್ರಕರಣವನ್ನು ಈ ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದಿದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಇಎಕ್ಸ್ಇ:3:ಸಿಆರ್ಎಂ 186:2001–02 ದಿನಾಂಕ: 22ನೇ ಜೂನ್ 2007**

ಹೆಚ್.ಎನ್. ಆನಂದ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 'ಬಿ' ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಹಾಗೂ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಆರಕ್ಷಕ ಉಪ ನಿರೀಕ್ಷಕರು, ಪೊನ್ನಂಪೇಟೆ ಠಾಣೆ ಇವರ ಮೊಕದ್ದಮೆ ಸಂ:70:2001:ದಿನಾಂಕ: 1.4.2001ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ಸಂ:ಎಂವೈಜಡ್ 3654 ಇದಕ್ಕೆ ಸಂಬಂಧಿಸಿದಂತೆ ಆರ್.ಡಿ. ಖಾತೆಯಲ್ಲಿರುವ ರೂ. 10,500.00 (ರೂಪಾಯಿ ಹತ್ತು ಸಾವಿರದ ಐನೂರು ಮಾತ್ರ) ಅಂಬಾಸಿಡರ್ ಕಾರಿನ ಸಂ:ಎಂವೈಜಡ್ 3654 ಇದಕ್ಕೆ ಸಮನಾದ ಮೊತ್ತವೆಂದು ಪರಿಗಣಿಸಿ ಸದರಿ ಹಣವನ್ನು ಅಬಕಾರಿ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಂಡು ಈ ಪ್ರಕರಣವನ್ನು ಈ ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಿ ಆದೇಶ ನೀಡಿರುತ್ತೇನೆ. ಈ ಆದೇಶವನ್ನು ದಿನಾಂಕ:22.6.2007ರಂದು ಬೆರಳಚ್ಚು ಮಾಡಿಸಿ, ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಪಿ.ಆರ್. 897 ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT, 2003**

**Preamble**

**Sub :** KVAT Act 2003-Clarification under Section 59(4) regarding the rate of tax applicable on `Current Transformers of 33 KV and above'

**Ref :** Application dated 8.6.2007 of Sri A.V. Reddy, Asst Manager Commercial,. M/s AREV AT T&D Instrument Transformers India Private Limited, 27th KM Bellary Road, Doddajala Post, Bangalore-562 157.

In his application dated 8.6.2007 cited above, of Sri A.V. Reddy, Asst Manager Commercial,. M/s AREVAT T&D Instrument Transformers India Private Limited, 27th KM Bellary Road, Doddajala Post, Bangalore-562 157. have sought clarification regarding the rate of tax applicable on Current Transformers of 33 KV and above'

2. Section 59 (4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR. 71/07-08, Dated: 22nd June 2007**

It is hereby clarified that the sale of Current Transformers of 33 KV and above' as specified in .Sl. No. 2 to the table in the Notification No. FD 316 CSL 2005 (1) dated:5-8-2005, is taxable at 4% irrespective of their value.

**B.A. HARISH GOWDA**

P.R. 922

Commissioner of Commercial Taxes,
(Karnataka), Bangalore,

**DIRECTORATE OF AYUSH DHANVANTHRI ROAD, BANGALORE,**

**NOTIFICATION**

**No: ISM/74/EST (1) 2005-06, Dated:18th June 2007**

In exercise of the powers conferred under sub-sections (1) & (2) of Section 5 of the Right to Information Act 2005, the following are designated as Public Information Officers, Assistant Public Information Officers and the first appellate authority under section 19(1) of Right to Information Act of 2005 for the public authorities shown against them Previous Notification of even no., dated:3.8.2006 is hereby with drawn with immediate effect.

| Sl. No | Name of the Public Authority | Public Information Officer 5(1) | Assistant Information Officer-5(2) | First Appellate Authority |
|---|---|---|---|---|
| 1 | Director of Ayush, Dhanwanthri Road, Bangalore | | | |
| a | Establishment Section | Administrative Officer, Directorate of Ayush, Dhanwanthri Road, Bangalore | Gazetter Manager, Directorate of Ayush Dhanwanthri Road, Bangalore | Chief Administrative Officer, Directorate of Ayush Dhanwanthri Road, Bangalore |
| b | Development Section | Administrative Officer, Directorate of Ayush, Dhanwanthri Road, Bangalore | Superintendent, Directorate of Ayush Dhanwanthri Road, Bangalore | Deputy Director (Concerned) Directorate of Ayush Dhanwanthri Road, Bangalore |
| c | Budget Section | Accounts Officer, , Directorate of Ayush, Dhanwanthri Road, Bangalore | Superintendent, Directorate of Ayush Dhanwanthri Road, Bangalore | Chief Administrative Officer, Directorate of Ayush Dhanwanthri Road, Bangalore |

| 1 | 2 | 3 | 4 | 5 |
|---|---|---|---|---|
| d | Accounts Section | Accounts Officer, , Directorate of Ayush, Dhanwanthri Road, Bangalore | Accounts Superintendent, Directorate of Ayush, Dhanwanthri Road, Bangalore | -do- |
| e | Accounts Cell Section | Accounts Officer, , Directorate of Ayush, Dhanwanthri Road, Bangalore | Superintendent, Directorate of Ayush, Dhanwanthri Road, Bangalore | -do- |
| f | Statistics Section | Administrative Officer Directorate of Ayush, Dhanwanthri Road, Bangalore | Superintendent, Directorate of Ayush, Dhanwanthri Road, Bangalore | -do- |
| g | Drug Licensing Unit | Drug Inspector, Directorate of Ayush, Dhanwanthri Road, Bangalore | Second Division Assistant Directorate of Ayush, Dhanwanthri Road, Bangalore | DLA (Homoeopathy) Director of Ayush, Bangalore<br><br>DLA (Ayurveda and Unani) Dy. Director (Pharmacy) Govt. Central Pharmacy Bangalore |
| h | Karnataka Ayurveda and Unani Practitioners Board, Bangalore | Registrar Karnataka Ayurveda and Unani Practitioners Board, Bangalore | Superintendent Karnataka Ayurveda and Unani Practitioners Board, Bangalore | Chief Administrative Officer, Directorate of Ayush Dhanwanthri Road, Bangalore / President Karnataka Ayurveda and Unani Practitioners Board Bangalore. |
| i | Karnataka Homoeopathy Board, Bangalore | Registrar Karnataka Homoeopathy Board, Bangalore | First Division Assistant Karnataka Homoeopathy Board, Bangalore | Chief Administrative Officer, Directorate of Ayush Dhanwanthri Road, Bangalore / President Karnataka Homoeopathy Board Bangalore. |

DIRECTOR
Department of Ayush Bangalore

P.R. 921

**REVENUE DEPARTMENT**

**OFFICE OF THE JOINT DIRECTOR OF LAND RECORDS CITY SURVEY, NORTH ZONE, BELGAUM**

**NOTIFICATION**

**No. CTS/EXT/18/2006-07/Dated: 30$^{TH}$ June 2007**

**CORRIGENDUM**

In the Notification No. CTS/EXT/18/2006-07 dated:18-12-2006 the following corrections are affected. The entries in the Col. No. 3 as shown below shall substitute the corresponding entries in the

Column No. 7 of the said notification. In addition to the Survey numbers already notified in the said notification the following entries as mentioned in the column Nos. 4,5 and 6 shall be included.

**S.P. BOBATI**
Joint Director of Land Records City
Survey, North Zone, Belgaum

**SCHEDULE**

**Statement showing the details of the corrections to be made**

| **Corrections to be affected** | | | **New additions** | | |
|---|---|---|---|---|---|
| S.No. | H.No. | Area A-G | S.No. | H.No. | Area A-G |
| 1 | 2 | 3 | 4 | 5 | 6 |
| | | | 953 | 1a | 4-29 |
| | | | | 1b | 5-39 |
| | | | | 2 | 15-26 |
| | | | 954 | A1 | 4-37 |
| | | | | A2 | 1-2 |
| | | | | 1A 1B | 2-7 |
| | | | | 1A2 | 0-34 |
| | | | | B | 1-0 |
| | | | | A | 8-32 |
| | | | | B | 1-3 |
| | | | | 1 | 4-38 |
| | | | | 2 | 1-02 |
| | | | | 3 | 3-15 |
| | | | 1013 | - | 1-7 |
| | | | 1014 | - | 0-28 |
| | | | 819 | - | 0-32 |
| | | | 1022 | - | 6-18 |
| | | | 1020 | - | 1-36 |
| | | | 498 | 1 | 2-20 |
| | | | | 2 | 9-13 |
| | | | | Total Extent | 79-10 |

**S.P. BOBATI**
Joint Director of Land Records City
Survey, North Zone, Belgaum

**REVENUE DEPARTMENT**

**OFFICE OF THE JOINT DIRECTOR OF LAND RECORDS CITY SURVEY, NORTH ZONE, BELGAUM**

**NOTIFICATION**

**No. CTS/EXT/18/2006-07/Dated: 30$^{TH}$ June 2007**

**CORRIGENDUM**

In the Notification No. CTS/EXT/18/2006-07 dated:18-12-2006 the following corrections are affected. The entries in the Col. No. 3 as shown below shall substitute the corresponding entries in the Column No. 7 of the said notification. In addition to the Survey numbers already notified in the said notification the following entries as mentioned in the column Nos. 4,5 and 6 shall be included.

**S.P. BOBATI**
Joint Director of Land Records City
Survey, North Zone, Belgaum

**SCHEDULE**

**Statement showing the details of the corrections to be made**

| Corrections to be affected | | | New additions | | |
|---|---|---|---|---|---|
| S.No. | H.No. | Area A-G | S.No. | H.No. | Area A-G |
| 1 | 2 | 3 | 4 | 5 | 6 |
| | | | 297 | | 9-00 |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | | |
| | | | | Total Extent | 9-00 |

**S.P. BOBATI**

P.R 915

Joint Director of Land Records City Survey, North Zone, Belgaum

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1,**
**ಕಾರ್ಮಿಕ ಭವನ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**
**ಸಂಖ್ಯೆ: ಡಬ್ಲ್ಯೂ ಸಿಎ /ಎಫ್‌ಸಿ/ಸಿಆರ್–60/2007, ದಿನಾಂಕ:14ನೇ ಸೆಪ್ಟೆಂಬರ್ 2007**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀ ತಿಮ್ಮೇಗೌಡ, 47 ವರ್ಷ,
ತಂದೆ:ಲೇಟ್ ವೆಂಕಟೇಗೌಡ
(ಮೃತ ಶ್ರೀ ರಂಗಸ್ವಾಮಿ ಇವರ ತಂದೆ)
2. ಶ್ರೀಮತಿ ಯಶೋದಮ್ಮ, 45 ವರ್ಷ
ಶ್ರೀ ತಿಮ್ಮೇಗೌಡ ರವರ ಹೆಂಡತಿ.
(ಮೃತ ಶ್ರೀ ರಂಗಸ್ವಾಮಿ ತಾಯಿ)
ಇಬ್ಬರ ವಾಸದ ವಿಳಾಸ:
ವರ್ತಿಕೆರೆ ಗ್ರಾಮ, ಕಸಬಾ ಹೋಬಳಿ, ಹಾಸನ
ತಾಲ್ಲೂಕು, ಹಾಸನ ಜಿಲ್ಲೆ.

ಶ್ರೀ ಗಿರೀಶ್, 30 ವರ್ಷ
ತಂದೆ ಶ್ರೀ ರಾಜೇಗೌಡ, ಮಾಲೀಕರು,
ಶ್ರೀ ರಂಗ ಐಯಂಗಾರ್ ಬೇಕರಿ ಮತ್ತು ಸ್ವೀಟ್ಸ್,
ವಿಳಾಸ: ಕಾಂಗ್ರೆಸ್ ಚಿಕ್ಕಣ್ಣ ಬಿಲ್ಡಿಂಗ್,
ದೊಡ್ಡಗೊಲ್ಲರಹಟ್ಟಿ, ಮಾಗಡಿ ಮುಖ್ಯ ರಸ್ತೆ,
ಯಶವಂತಪುರ ಹೋಬಳಿ, ಬೆಂಗಳೂರು ಉತ್ತರ
ತಾಲ್ಲೂಕು, 560 132.

**ಪ್ರಕಟಣೆ**

ಈ ಮೇಲೆ ನಮೂದಿಸಿರುವ ಅರ್ಜಿದಾರರು ತಾವು ಮೃತ ಶ್ರೀ ರಂಗಸ್ವಾಮಿ ಇವರ ಅವಲಂಬಿತರೆಂದು, ಮೃತನು ಪ್ರತಿವಾದಿ ಬಳಿ ಸ್ವೀಟ್ ಮೇಕರ್ ಆಗಿ ಕೆಲಸ ಮಾಡುವಾಗ, ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:6–10–2006 ರಂದು ಮರಣ ಹೊಂದಿರುತ್ತಾರೆ. ಎಂದು, ಈ ಸಂಬಂಧ ತಮಗೆ ಕಾಯ್ದೆಯ

ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ ಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹಾ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು,. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್. 1225 ಹಾಗೂ ಕಾರ್ಮಿಕ ಅಧಿಕಾರಿ, ಉಪ ವಿಭಾಗ–1, ಬೆಂಗಳೂರು

**GOVERNMENT OF KARNATAKA**

**DIRECTORATE OF ECONOMICS AND STATISTICS BANGALORE-1**

**Consumer Price Index Numbers for Industrial Workers.**

**No:DES 25 PWX 2007**

**State: Karnataka** **Base:1987-88=100** **Month: April 2007** **Date: 7.7.2007**

| Group/Sub-Group | | Bellary | Bhad-ra-vathi | Da-van-gere | Dan-deli | Gul-barga | Harihar | Hassan | Mandya | Mangalore | Rai-Chur | Tumkur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| 1 | Food: (a) Cereals & Products | 402 | 461 | 451 | 382 | 353 | 394 | 403 | 392 | 324 | 356 | 417 |
| | (b) Pulses & Products | 357 | 422 | 449 | 479 | 349 | 405 | 445 | 461 | 428 | 391 | 417 |
| | (c) Oil & Fats | 265 | 300 | 265 | 300 | 258 | 293 | 281 | 296 | 246 | 280 | 283 |
| | (d) Meat, Fish & Eggs | 411 | 461 | 435 | 509 | 468 | 392 | 384 | 439 | 612 | 585 | 403 |
| | (e) Milk & Products | 361 | 299 | 347 | 334 | 312 | 392 | 258 | 366 | 311 | 328 | 297 |
| | (f) Condiments & Spices | 318 | 388 | 421 | 430 | 332 | 386 | 376 | 373 | 310 | 364 | 372 |
| | (g) Vegetables & Fruits | 310 | 338 | 454 | 473 | 363 | 373 | 375 | 469 | 333 | 267 | 471 |
| | (h) Other Food | 282 | 397 | 384 | 352 | 324 | 289 | 317 | 300 | 291 | 314 | 341 |
| | **FOOD GROUP INDEX** | **355** | **401** | **414** | **394** | **342** | **368** | **360** | **390** | **362** | **358** | **380** |

| | | | | | | | | | | | | |
|---|---|---|---|---|---|---|---|---|---|---|---|---|
| II | Pan, Supari, Tobacco & Intoxicants | 355 | 365 | 412 | 340 | 588 | 500 | 381 | 478 | 292 | 365 | 398 |
| III | Flue & Light | 370 | 328 | 330 | 457 | 320 | 340 | 356 | 333 | 291 | 481 | 300 |
| IV | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V | Clothing,Bed ding & Footwear | 259 | 257 | 241 | 374 | 283 | 266 | 350 | 381 | 242 | 468 | 214 |
| VI | Miscell aneous | | | | | | | | | | | |
| | (a) Medical Care | 639 | 685 | 386 | 291 | 274 | 268 | 385 | 329 | 359 | 436 | 216 |
| | (b) Education, Recreation & Amusement | 363 | 405 | 518 | 239 | 391 | 483 | 352 | 303 | 505 | 345 | 326 |
| | (c) Transport & Communicati on | 419 | 445 | 358 | 655 | 595 | 423 | 400 | 566 | 608 | 390 | 444 |
| | (d) Personal Care & effects | 288 | 278 | 262 | 273 | 283 | 254 | 301 | 301 | 284 | 260 | 270 |
| | (e) Others Miscellaneou s Group | 361<br>402 | 355<br>386 | 289<br>342 | 462<br>353 | 293<br>339 | 273<br>325 | 270<br>330 | 290<br>314 | 245<br>387 | 466<br>378 | 243<br>284 |
| | **GENERAL INDEX** | **326** | **344** | **343** | **362** | **313** | **318** | **326** | **343** | **323** | **353** | **292** |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

for Director.

**Government of India,**
**Ministry of Labour (Labour Bureau)**
**No. 112/1(RTK)/2006-NCPI**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: April, 2007

| | Group/Sub-group/ Centre | Bangalore | Belgaum | Hubli Dharwar | Mercara | Mysore |
|---|---|---|---|---|---|---|
| | 1 | 2 | 3 | 4 | 5 | 6 |
| | **I A:FOOD:** | | | | | |
| | (a) Cereals & Products | 131 | 118 | 129 | 111 | 122 |
| | (b) Pulses & Products | 135 | 138 | 136 | 134 | 136 |
| | (c) Oils & Fats | 169 | 158 | 154 | 159 | 148 |
| | (d) Meat, Fish & Eggs | 147 | 151 | 144 | 133 | 156 |
| | (e) Milk & Products | 128 | 120 | 107 | 122 | 132 |
| | (f) Condiments & Spices | 132 | 128 | 128 | 123 | 130 |
| | (g) Vegetables & Fruits | 125 | 147 | 134 | 124 | 110 |
| | (h) Other Food | 131 | 120 | 123 | 122 | 122 |
| | **I-A FOOD GROUP** | 134 | 128 | 129 | 122 | 127 |

| | | | | | | |
|---|---|---|---|---|---|---|
| | I-Pan, Supari, Tobacco & Intoxicants | 138 | 112 | 118 | 116 | 134 |
| | II-Fuel & Light | 145 | 147 | 131 | 104 | 149 |
| | III-Housing Index | 129 | 114 | 125 | 104 | 120 |
| | IV-Clothing, Bedding & Footwear | 99 | 112 | 117 | 114 | 105 |
| | **V-Miscellaneous:** | | | | | |
| | (a) Medical Care | 139 | 135 | 124 | 126 | 129 |
| | (b) Education, Recreation & Amusement | 133 | 133 | 126 | 132 | 112 |
| | (c) Transport & Communication | 168 | 182 | 179 | 154 | 154 |
| | (d) Personal Care & effects | 122 | 121 | 122 | 116 | 120 |
| | (e) Others | 117 | 111 | 116 | 115 | 137 |
| | Miscellaneous Group | 141 | 137 | 135 | 128 | 130 |
| | **GENERAL INDEX** | **133** | **129** | **129** | **119** | **127** |

**HARITA SABHARWAL**
Deputy Director

PR- 945

## HEALTH & FAMILY WELFARE DEPARTMENT

## ADDENDUM

**No. HFW 82 PTD 2007, Bangalore, Dated: 28th June 2007**

In the Notification No. HFW 75 PTD 2006, dated:17-7-2006 after Sl.No. 52 of Ayurveda and after un-aided Nature Cure and Yoga colleges list the following shall be inserted respectively.

53 SDM Trusts Ayurvedic Medical College Terdal

**Nature Cure and Yoga**

**Government College**

01 Government Nature Cure and Yoga College,
Sayyaji Rao Road,
Mysore-560 012.

By Order and in the name of the Governor of Karnataka

**N. MAHALAKSHMAMMA**
Under Secretary to Government
Health & Family Welfare Department

PR- 942

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**ಕ್ರ:ಸಂ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:36:2006–07:1005, ದಿನಾಂಕ:23ನೇ ಆಗಸ್ಟ್ 2007**

**ವಿಷಯ :** ಸಮಾಪನಾ ಆದೇಶಿತ ಕುಂಬಾರರ ಕುಶಲ ಕೈಗಾರಿಕಾ ಸೇವಾ ಸಹಕಾರ ಸಂಘ ನಿ: ಹೊಳೆಹೊನ್ನೂರು ಭದ್ರಾವತಿ ತಾ: ಇದರ ಪುನಃಶ್ಚೇತನಕ್ಕೆ ಪ್ರಸ್ತಾವನೆ ಸಲ್ಲಿಸುವ ಬಗ್ಗೆ

**ಉಲ್ಲೇಖ :** 1) ಈ ಕಚೇರಿಯ ಸಮಾಪನಾ ಆದೇಶ ಸಂ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 36:04–05:ದಿನಾಂಕ:20–9–04

2) ಶಾಸಕರು, ಹೊಳೆಹೊನ್ನೂರು ಕ್ಷೇತ್ರ ಇವರ ಪತ್ರ ದಿ:19–12–06

3) ಈ ಕಚೇರಿಯ ಇದೇ ಸಮಸಂಖ್ಯೆ ಪತ್ರ ದಿನಾಂಕ:17–1–07

4) ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ, ಇವರ ಪ್ರಸ್ತಾವನೆ ಸಂ:ಎಆರ್ 24:ಸಮಾಪನೆ:202:05–06:ದಿನಾಂಕ:19–7–2007

**ಪ್ರಸ್ತಾವನೆ:**

ಕುಂಬಾರರ ಕುಶಲಕೈಗಾರಿಕಾ ಸಹಕಾರ ಸಂಘ ನಿ:ಹೊಳೆಹೊನ್ನೂರು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಇವರ ಕಾರ್ಯಾಲಯದಲ್ಲಿ ಸಂಖ್ಯೆ:10247: 83:ದಿನಾಂಕ:27–7–1983ರಲ್ಲಿ ನೊಂದಣಿಯಾಗಿದ್ದು, ಈ ಸಂಘವು ಸಮರ್ಪಕವಾಗಿ ಕೆಲಸ ನಿರ್ವಹಿಸದ ಕಾರಣ ಈ ಕಚೇರಿಯಿಂದ ಉಲ್ಲೇಖ (1)ರ ಆದೇಶದನ್ವಯ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ. ಸದರಿಯವರು ಸಂಘದ ಸಮಾಪನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಮಧ್ಯ ಉಲ್ಲೇಖ (2) ರನ್ವಯ ಮಾನ್ಯ ಶಾಸಕರು, ಹೊಳೆಹೊನ್ನೂರು ಕ್ಷೇತ್ರ, ಇವರು ಸಂಘವನ್ನು ಪುನಃಶ್ಚೇತನಗೊಳಿಸಲು ತಿಳಿಸಿರುತ್ತಾರೆ. ಈ ಸಂಬಂಧ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ,

ಇವರಿಗೆ ಉಲ್ಲೇಖ (3)ರಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಲು ಕ್ರಮಕೈಗೊಳ್ಳುವ ಕುರಿತು ಸಂಘದ ಬಾಕಿ ಇರುವ ಸಾಲುಗಳ ಆಡಿಟ್ ಮಾಡಿಸಲು ಕ್ರಮವಿಡುವಂತೆ ಸೂಚಿಸಿದ್ದು, ಅದರಂತೆ ಸಹಾಯಕ ನಿಬಂಧಕರು ಸಂಘದ ಸಮಾಪನಾಧಿಕಾರಿಗಳಿಗೆ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಲು ಸೂಚಿಸಿದ್ದರ ಮೇರೆಗೆ ಸದರಿಯವರು ನೀಡಿರುವ ಪ್ರಸ್ತಾವೆಯನ್ವಯ ಸಂಘವನ್ನು ಪುನಃಶ್ಚೇತನಗೊಳಿಸಲು ಕೆಳಕಂಡಂತೆ ಅಭಿಪ್ರಾಯದೊಂದಿಗೆ ಶಿಫಾರಸ್ಸು ಮಾಡಿರುತ್ತಾರೆ.

ಭದ್ರಾವತಿ ತಾಲ್ಲೂಕಿನಲ್ಲಿ ಕುಂಬಾರರ ಸಹಕಾರ ಸಂಘವು ಏಕೈಕವಾಗಿರುತ್ತದೆ. ಸಂಘವನ್ನು ರದ್ದುಪಡಿಸಿದಲ್ಲಿ, ಕುಂಬಾರರಿಗೆ ಆಶ್ರಯವಾಗಿರುವ ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವಾಗಿರುತ್ತದೆ. ಕೈಗಾರಿಕೆ ಇಲಾಖೆಯಿಂದ ಕುಂಬಾರರಿಗೆ ಹಲವಾರು ಪ್ರಯೋಜನಗಳು ಲಭ್ಯವಿರುತ್ತದೆ. ಈ ಪ್ರಯೋಜನಗಳನ್ನು ಈ ಸಹಕಾರ ಸಂಘದ ಮುಖಾಂತರ ಪಡೆಯಬಹುದಾಗಿದೆ ಎಂಬುದಾಗಿ ಸಂಘದ ಸಮಾಪನಾಧಿಕಾರಿಗಳು ದಿನಾಂಕ:2-7-2007ರಲ್ಲಿ ಸಂಘದ ಪುನಃಶ್ಚೇತನಕ್ಕೆ ನಿರ್ಣಯವನ್ನು ಕೈಗೊಂಡಿರುತ್ತಾರೆ.

ಸಂಘದ ಲೆಕ್ಕಪತ್ರಗಳು 2005-06ನೇ ಸಾಲಿನವರೆಗೆ ಆಡಿಟ್ ಆಗಿರುತ್ತದೆ ಎಂಬುದಾಗಿ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಇವರು ತಿಳಿಸಿರುತ್ತಾರೆ ಹಾಗೂ ಕುಂಬಾರಿಕೆ ವೃತ್ತಿಯನ್ನು ಹೊಂದಿರುವ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ತೋರಿಸಿರುವುದರಿಂದ ಸಹಾಯಕ ನಿಬಂಧಕರು ಈ ಬಗ್ಗೆ ಮಾಡಿರುವ ಶಿಫಾರಸ್ಸಿನ ಆಧಾರಿತವಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರಾದ ಸಿ.ಎನ್. ದೇವರಾಜ್, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ. ಸಿಎಂಡಬ್ಲ್ಯೂ :69:ಸಿಎಲ್ಎಂ:2001:ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ ಸಮಾಪನೆಯಾದ ಕುಂಬಾರರ ಕುಶಲ ಕೈಗಾರಿಕಾ ಸಹಕಾರ ಸಂಘ ನಿ: ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು, ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ, ಈ ಕೆಳಕಂಡ ಷರತ್ತುಪೂರಕವಾಗಿ ಪುನಃಶ್ಚೇತನಗೊಳಿಸಿ ಆದೇಶಿಸಿದ್ದೇನೆ.

**ಷರತ್ತುಗಳು:**

1) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿ ಪ್ರಕಾರ ಇತ್ತೀಚಿನ ತಿದ್ದುಪಡಿ ಆಧಾರಿತವಾಗಿ ಬೈಲಾ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯತಕ್ಕದ್ದು.

2) ಸಮಾಪನಾ ಆಡಳಿತ ಪೂರ್ವದಲ್ಲಿದ್ದ ಈ ಸಂಘದ ಕಾರ್ಯವ್ಯಾಪ್ತಿಯಂತೆ ಕಾರ್ಯನಿರ್ವಹಿಸತಕ್ಕದ್ದು. ಒಂದು ವೇಳೆ ಕಾರ್ಯವ್ಯಾಪ್ತಿ ಪ್ರದೇಶವು ಬೇರೆ ಸಹಕಾರ ಸಂಘಕ್ಕೆ ಸೇರ್ಪಡೆಯಾಗಿದ್ದಲ್ಲಿ ಆ ಸಂಘದವರು ಕಾರ್ಯವ್ಯಾಪ್ತಿಯನ್ನು ಬಿಟ್ಟುಕೊಡುವುದರೊಂದಿಗೆ ಆಸ್ತಿ ಜವಾಬ್ದಾರಿಯನ್ನು ವರ್ಗಾಯಿಸತಕ್ಕದ್ದು.

3) ಸದಸ್ಯತ್ವ ಹೆಚ್ಚಿಸಿ ಠೇವಣಾತಿ ಸಂಗ್ರಹಿಸಿ ಸಂಘದ ದುಡಿಯುವ ಬಂಡವಾಳ ಹೆಚ್ಚಿಸಿಕೊಳ್ಳತಕ್ಕದ್ದು.

ಸಂಘದ ಸಮಾಪನಾಧಿಕಾರಿಯವರು 2 ತಿಂಗಳೊಳಗಾಗಿ ಆಡಳಿತ ಮಂಡಳಿ ರಚನೆಗಾಗಿ ಸಂಬಂಧಿಸಿದ ಅಧಿಕಾರಿಯವರಿಂದ ಚುನಾವಣಾಧಿಕಾರಿ ನೇಮಕಾತಿ ಪಡೆದು ಸರ್ವಸದಸ್ಯರ ಸಭೆ ಕರೆದು ಪ್ರಭಾರ ವಹಿಸಿಕೊಡಲು ಆದೇಶಿಸಿದೆ.

ಈ ಆದೇಶವನ್ನು ಕಚೇರಿಯ ಮೊಹರು ಹಾಗೂ ನನ್ನ ಸ್ವಸಹಿಯೊಂದಿಗೆ ಈ ದಿನಾಂಕ 23ನೇ ಆಗಸ್ಟ್ 2007 ರಂದು ಹೊರಡಿಸಿದೆ.

ಸಿ.ಎನ್. ದೇವರಾಜ್
ಸಹಕಾರ ಸಂಘಗಳ ಉಪ -ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಪಿ.ಆರ್. 1227

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 42 ಭಾನಿವಿ 2007, ಬೆಂಗಳೂರು, ದಿನಾಂಕ:23ನೇ ಜೂನ್ 2007**

**ವಿಷಯ :** ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಮತ್ತು ಗ್ರೂಪ್-ಬಿ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ:1.1.2007ರಲ್ಲಿರುವಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1) ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 6 ಭಾನಿವಿ 2006, ದಿನಾಂಕ:28.3.2006

2) ಭಾಷಾಂತರ ನಿರ್ದೇಶಕರ ಪತ್ರ ಸಂಖ್ಯೆ:ಭಾನಿ 74/ಆಡಳಿತ/ಗ್ರೂಪ್ ಎಬಿ/ಜ್ಯೇಷ್ಠತೆ/2007

ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಮತ್ತು ಗ್ರೂಪ್-ಬಿ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ದಿನಾಂಕ:1.1.2006ರಲ್ಲಿರುವಂತೆ ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದೆ. ದಿನಾಂಕ:1.1.2006ರಿಂದ ದಿನಾಂಕ:31.12.2006ರವರೆಗೆ ಆಗಿರುವ ಬದಲಾವಣೆಗಳನ್ನು ಪರಿಗಣಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ)

ನಿಯಮಗಳು, 1957ರ 10ನೇ ನಿಯಮದ (1)ನೇ ಉಪ-ನಿಯಮದನ್ವಯ ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಮತ್ತು ಗ್ರೂಪ್-ಬಿ ಅಧಿಕಾರಿಗಳ (ಭಾಷಾಂತರಕಾರರ ವೃಂದವನ್ನು ಹೊರತುಪಡಿಸಿ) ಜೇಷ್ಠತಾ ಪಟ್ಟಿಯನ್ನು ದಿನಾಂಕ:1.1.2007ರಲ್ಲಿರುವಂತೆ ಅನುಬಂಧದಲ್ಲಿ ಲಗತ್ತಿಸಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಶ್ರೀಧರ್**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ಅನುಬಂಧ**

**ದಿನಾಂಕ:1.1.2007ರಲ್ಲಿ ಇರುವಂತೆ ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಮತ್ತು ಗ್ರೂಪ್-ಬಿ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಭಾಷಾಂತರ ನಿರ್ದೇಶಕರು (ರೂ. 10620-260-10880-320-13440-380-14960) | | | | | | |
| 1 | ವೆಂಕಟರಾಮಯ್ಯ | ಮುಂಬಡ್ತಿ | 22.6.1949 | 1.12.1975 | 6.10.2006 | 6.10.2006 |
| ಉಪನಿರ್ದೇಶಕರು (ರೂ. 9580-260-10880-320-13440-380-14200) | | | | | | |
| 1 | ಸಿ.ವಿ. ಸತ್ಯವತಿ | ಮುಂಬಡ್ತಿ | 19.5.1952 | 9.1.1973 | 1.8.1998 | 1.8.1998 |
| 2 | ಎಂ. ಜೈಕುಮಾರ್ | ಮುಂಬಡ್ತಿ | 22.2.1951 | 14.10.1974 | 20.3.2003 | 20.3.2003 |
| 3 | ರತ್ನಕುಮಾರಿ | ಮುಂಬಡ್ತಿ | 8.10.1951 | 12.12.1974 | 11.10.2005 | 11.10.2005 |
| 4 | ವೈ.ಎಸ್. ಜ್ಯೋತಿದೇವಿ | ಮುಂಬಡ್ತಿ | 16.10.1950 | 16.10.1974 | 19.10.2005 | 19.10.2005 |
| 5 | ಕೆ.ಎಸ್. ಗೀತಾ | ಮುಂಬಡ್ತಿ | 23.10.1951 | 1.5.1975 | 9.11.1996 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 54 ಭಾನಿವಿ 2006 ದಿನಾಂಕ:9.11. 2006 | 9.11.1996 |
| ಸಹಾಯಕ ನಿರ್ದೇಶಕರು (ರೂ. 7400-200-8800-260-10880-320-13120) | | | | | | |
| 1 | ಹೆಚ್.ಪಿ. ದಾಮೋದರ್ | ಮುಂಬಡ್ತಿ | 15.10.1951 | 1.4.1973 | 9.12.1996 | 9.12.1996 |
| 2 | ಐ.ಎಸ್. ಪಾಟೀಲ್ | ಮುಂಬಡ್ತಿ | 1.8.1950 | 5.11.1974 | 4.10.2004 | 4.10.2004 |
| 3 | ಆರ್. ಪ್ರೇಮಾ | ಮುಂಬಡ್ತಿ | 8.12.1949 | 1.3.1970 | 11.10.2005 | 11.10.2005 |
| 4 | ದೇವರಾಜು | ಮುಂಬಡ್ತಿ | 6.4.1952 | 8.12.1983 | 11.10.2005 | 11.10.2005 |
| 5 | ವೆಂಕಟಾಚಲಪತಿ | ಮುಂಬಡ್ತಿ | 4.4.1952 | 23.10.1974 | 11.10.2006 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 29 ಭಾನಿವಿ 2006 ದಿನಾಂಕ:11.10.2006 | 11.10.2006 |

| 1 | 2 | 3 | 4 | 5 | 6 | 7 |
|---|---|---|---|---|---|---|
| 6 | ಬಿ.ಎಸ್. ಜಗದೀಶ್ | ಮುಂಬಡ್ತಿ | 10.3.1950 | 13.8.1979 | 11.10.2006 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 29 ಭಾನಿವಿ 2006 ದಿನಾಂಕ:11.10.2006 | 11.10.2006 |
| ಸಂಶೋಧನಾಧಿಕಾರಿಗಳು (ರೂ. 6000–150–7200–200–8800–260–10880–320–11200) | | | | | | |
| 1 | ಜಿ. ಚೆನ್ನಬಸಪ್ಪ | ಮುಂಬಡ್ತಿ | 13.8.1954 | 13.6.1983 | 21.4.1997 | 21.4.1997 |
| 2 | ಶೋಭಾ ಎಂ. ಕಟ್ಟಿ | ಮುಂಬಡ್ತಿ | 27.7.1954 | 15.6.1983 | 21.4.1997 | 21.4.1997 |
| 3 | ವೀರಭದ್ರಸ್ವಾಮಿ | ಮುಂಬಡ್ತಿ | 15.7.1954 | 7.12.1983 | 21.4.1997 | 21.4.1997 |
| 4 | ಐ.ಎಂ. ಕಂಬಳಿ | ಮುಂಬಡ್ತಿ | 5.8.1958 | 14.6.1983 | 10.6.1999 | 10.6.1999 |
| 5 | ಜಿ. ಮಹದೇವ್ | ಮುಂಬಡ್ತಿ | 17.5.1955 | 12.12.1983 | 10.6.1999 | 10.6.1999 |
| 6 | ಎಸ್.ಎಸ್. ಪರಮೇಶ್ | ಮುಂಬಡ್ತಿ | 20.4.1952 | 14.12.1983 | 16.1.2002 | 16.1.2002 |
| 7 | ಎನ್. ಜಯಲಕ್ಷ್ಮಮ್ಮ | ಮುಂಬಡ್ತಿ | 22.3.1953 | 1.6.1971 | 4.10.2004 | 4.10.2004 |
| 8 | ಹೆಚ್.ಎನ್. ಸೋಮಶೇಖರಪ್ಪ | ಮುಂಬಡ್ತಿ | 20.5.1952 | 12.12.1974 | 11.10.2005 | 11.10.2005 |
| 9 | ಎಂ. ವೆಂಕಟೇಶ | ಮುಂಬಡ್ತಿ | 12.11.1968 | 25.1.1999 | 11.10.2005 | 11.10.2005 |
| 10 | ಶಾರದಾ ಜಿ. ರಾವ್ | ಮುಂಬಡ್ತಿ | 24.4.1952 | 11.01.1973 | 19.10.2006 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 31 ಭಾನಿವಿ 2006 ದಿನಾಂಕ: 19.10.2006 | 19.10.2006 |
| ನಿರ್ದೇಶಕರ ಗೆಜೆಟೆಡ್ ಆಪ್ತ ಸಹಾಯಕರು (ರೂ. 5575–125–5700–150–720–200–8800–260–10620) | | | | | | |
| 1 | ಹೆಚ್. ನಾಗರತ್ನ | ಮುಂಬಡ್ತಿ | 1.5.1952 | 16.10.1974 | 11.10.2006 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 41 ಭಾನಿವಿ 2006 ದಿನಾಂಕ: 11.10.2006 | 11.10.2006 |
| ಸಹಾಯಕ ಆಡಳಿತಾಧಿಕಾರಿಗಳು (ರೂ. 5575–125–5700–150–720–200–8800–260–10620) | | | | | | |
| 1 | ಬೈಲರಂಗಯ್ಯ | ಮುಂಬಡ್ತಿ | 4.3.1952 | 18.8.1977 | 13.9.2006 ಸರ್ಕಾರದ ಅಧಿಸೂಚನೆ ಸಂ:ಸಂವ್ಯಶಾಇ 65 ಭಾನಿವಿ 2005 ದಿನಾಂಕ: 13.9.2006 | 13.9.2006 |

**ಜಿ. ಶ್ರೀಧರ್**

ಪಿ.ಆರ್. 903

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಸಾರ್ವಜನಿಕ ಪ್ರಕಟಣೆಗಾಗಿ
## ಮಾಹಿತಿ ಹಕ್ಕು ಅಧಿನಿಯಮ–2005 (ಭಾರತ ಸರ್ಕಾರ)
## ಕರ್ನಾಟಕ ಸರ್ಕಾರ
## ಕಂದಾಯ ಇಲಾಖೆ
## ಉಪವಿಭಾಗಾಧಿಕಾರಿಗಳ ಕಚೇರಿ, ಸಾಗರ ಉಪವಿಭಾಗ, ಸಾಗರ

1) ಕಲಂ 4(1)ಎ–ಹಂತಹಂತವಾಗಿ ಸರ್ಕಾರದ ಸೂಚನೆಯಂತೆ ಕಾರ್ಯಗತಗೊಳಿಸಲಾಗುವುದು.

2) ಕಲಂ 4(1)ಬಿ:

(i) ಸಾಗರ ಉಪವಿಭಾಗವು ಸಾಗರ, ಸೊರಬ, ಹೊಸನಗರ ಹಾಗೂ ಶಿಕಾರಿಪುರ ತಾಲ್ಲೂಕುಗಳನ್ನು ಹೊಂದಿದ್ದು, ಹಾಲಿ ನಿಯಮಗಳಂತೆ ಕಂದಾಯ ಇಲಾಖೆಯ ಕಾರ್ಯಗಳನ್ನು ಉಸ್ತುವಾರಿ ಮಾಡುವುದು ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಮತ್ತು ಮೇಲಾಧಿಕಾರಿಗಳಿಂದ ಬಂದ ಸೂಚನೆಗಳಂತೆ ಕಾರ್ಯನಿರ್ವಹಿಸುವುದು.

(ii) ಉಪವಿಭಾಗದ ಕಂದಾಯ ಇಲಾಖೆಗಳ ಹಾಗೂ ಪುರಸಭೆ ಮತ್ತು ಪುರ ಪಂಚಾಯತ್ತಿಗಳ ಕಾರ್ಯವನ್ನು ಪರಿಶೀಲಿಸುವುದು, ಉಪವಿಭಾಗದ ಅಧೀನ ಸಿಬ್ಬಂದಿಗಳ ಕಾರ್ಯಗಳನ್ನು ಪರಿಶೀಲಿಸಿ ಉಸ್ತುವಾರಿ ಮಾಡುವುದು ಹಾಗೂ ಮಾರ್ಗದರ್ಶನ ನೀಡುವುದು.

(iii) ಉಪವಿಭಾಗದ ಕಂದಾಯ ಇಲಾಖೆಯ ಕೆಲಸಗಳ ಉಸ್ತುವಾರಿ, ಸರಿಪಡಿಸುವುದು, ನಿಯಮ ಉಲ್ಲಂಘನೆ, ದುರುಪಯೋಗವಾದಲ್ಲಿ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸುವುದು.

(iv) ಹಾಲಿ ಇಲಾಖೆಗೆ ಅನ್ವಯವಾಗುವ ಅಧಿನಿಯಮ, ನಿಯಮಾವಳಿಗಳು ಹಾಗೂ ಕಾಲಕಾಲಕ್ಕೆ ಸರ್ಕಾರ ನೀಡುವ ಸೂಚನೆ– ಸುತ್ತೋಲೆಗಳಂತೆ ಕಾರ್ಯನಿರ್ವಹಿಸುವುದು.

(v) ಹಾಲಿ ಕಂದಾಯ ಇಲಾಖೆಗೆ ಅನ್ವಯವಾಗುವ ಅಧಿನಿಯಮಗಳು, ನಿಯಮಾವಳಿಗಳು, ಸುತ್ತೋಲೆ ಸೂಚನೆಗಳಂತೆ ಕಾರ್ಯನಿರ್ವಹಿಸುವುದು.

(vi) (ಅ) ಭೂ ಸ್ವಾಧೀನ ಪ್ರಕರಣಗಳ ದಾಖಲೆಗಳು (ಆ) ಮೇಲ್ಮನವಿ ಪ್ರಕರಣಗಳ ಆದೇಶಗಳು (ಇ) ಪ್ರಕೃತಿ ವಿಕೋಪ ಪ್ರಕರಣಗಳಲ್ಲಿ ದಾಖಲೆಗಳು

(ಈ) ಮುಜರಾಯಿ ಸಂಸ್ಥೆಗಳಿಗೆ ಸಂಬಂಧಿಸಿದ ಸಂಸ್ಥೆಗಳ ಸಮಿತಿಗಳ ಮಾಹಿತಿಗಳು

(ಉ) ಪಿ.ಟಿ.ಸಿ.ಎಲ್. ಪ್ರಕರಣಗಳ ಆದೇಶಗಳು

(vii) (ಅ) ರೈತರ ಆತ್ಮಹತ್ಯೆ ಪ್ರಕರಣಗಳ ವಿಲೇವಾರಿ

(ಆ) ಜೀತಪದ್ಧತಿ ಪ್ರಕರಣಗಳ ವಿಲೇವಾರಿ

(ಇ) ಪ್ರಧಾನ ಮಂತ್ರಿಗಳ ವಿದರ್ಭಾ ರೈತರ ಪ್ಯಾಕೇಜ್ ಯೋಜನೆ

(viii) ಯಾವುದೇ ರಿಯಾಯ್ತಿ, ಅನುಮತಿ ಪತ್ರ ವಗೈರೆ ವ್ಯವಸ್ಥೆ ಅನ್ವಯಿಸುವುದಿಲ್ಲ.

(ix) ಕಛೇರಿಯಲ್ಲಿ ನಿರ್ವಹಿಸಲಾಗಿದೆ ಹಾಗೂ ಸಾರ್ವಜನಿಕರಿಗೆ ಈ ಬಗ್ಗೆ ಮಾಹಿತಿ ನೀಡಲಾಗುವುದು.

(x) ಯಾವುದೇ ಗೌರವಧನ, ಪರಿಹಾರ ಧನವನ್ನು ಯಾವುದೇ ನೌಕರರಿಗೆ ನೀಡುತ್ತಿಲ್ಲ.

(xi) ಯಾವುದೇ ಯೋಜನಗಳಿರುವುದಿಲ್ಲ. ಪ್ರಯುಕ್ತ ಆಯವ್ಯಯ ಅನ್ವಯಿಸುವುದಿಲ್ಲ.

(xii) ಸಹಾಯಧನ ನೀಡುವ ಯಾವುದೇ ಯೋಜನೆಗಳಿರುವುದಿಲ್ಲ

(xiii) ಯಾವುದೇ ಸಹಾಯ ನೀಡುವ ಯೋಜನೆಗಳಿರುವುದಿಲ್ಲ.

(xiv) ಮಾಹಿತಿಯನ್ನು ಸರ್ಕಾರದ ಸೂಚನೆಯಂತೆ ಹಂತ ಹಂತವಾಗಿ ಗಣಕೀಕರಣ ಗೊಳಿಸಲಾಗುವುದು.

(xv) ಸಾರ್ವಜನಿಕರಿಗೆ ಇಲಾಖಾ ಮಾಹಿತಿಯನ್ನು ನೀಡಲಾಗುವುದು. ಕಛೇರಿಯ ಕಡತಗಳನ್ನು ಪರಿಶೀಲಿಸಲು ಇಚ್ಛಿಸಿದಲ್ಲಿ ವೀಕ್ಷಣೆಗೆ ಅವಕಾಶ ಕಲ್ಪಿಸಿದೆ. ಇದಕ್ಕಾಗಿ (1) ಶ್ರೀ ಟಿ. ಪರಮೇಶ್ವರ, ದ್ವಿ.ದ.ಸ. ಹಾಗೂ (2) ಶ್ರೀ ಎಲ್. ಮಹಾದೇವಪ್ಪ ಡಿ ನೌಕರರವರನ್ನು ನಿಯೋಜಿಸಿದೆ. ನಿಗದಿಪಡಿಸಿದ ದಿನ,. ಸಮಯದಂದು ಕಡತ ವೀಕ್ಷಿಸಬಹುದಾಗಿದೆ. ಯಾವುದೇ ಗ್ರಂಥಾಲಯ, ಓದುವ ಕೋಣೆ ವ್ಯವಸ್ಥೆ ಇರುವುದಿಲ್ಲ.

(xvi) ಶ್ರೀ ಎಂ.ಕೆ. ಶ್ರೀರಂಗಯ್ಯ, ಕೆ.ಎ.ಎಸ್., ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಉಪವಿಭಾಗಾಧಿಕಾರಿ, ಸಾಗರ ಉಪವಿಭಾಗ, ಸಾಗರ– ಕಲಂ 5(1)ರಂತೆ ಶ್ರೀ ಕೆ.ಎಸ್. ಜ್ಞಾನಪ್ಪ, ವ್ಯವಸ್ಥಾಪಕರು, ಉಪವಿಭಾಗಾಧಿಕಾರಿಗಳ ಕಛೇರಿ, ಸಾಗರ–ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ– ಕಲಂ 5(2)ರಂತೆ.

(xvii) ಕಾಲ ಕಾಲಕ್ಕೆ ಸರ್ಕಾರ ನೀಡುವ ಸೂಚನೆಗಳನ್ನು ಪಾಲಿಸುವುದು, ವಿಷಯಗಳನ್ನು ನವೀಕರಿಸಲಾಗುವುದು– ಪ್ರಕಟಿಸಲಾಗುವುದು.

ಕಛೇರಿಯ ಸಿಬ್ಬಂದಿಗಳಿಗೆ ಈ ಕೆಳಕಂಡಂತೆ ಕೆಲಸ ಹಂಚಿಕೆ ಮಾಡಲಾಗಿದೆ

| ಕ್ರ.ಸಂ | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ನಿರ್ವಹಿಸಲಾದ ವಿಷಯಗಳು |
|---|---|---|
| 1 | ಕೆ.ಎಸ್. ಜ್ಞಾನಪ್ಪ<br>ವ್ಯವಸ್ಥಾಪಕರು | 1) ಆಡಳಿತ<br>2) ಸಾರ್ವಜನಿಕ ಕುಂದುಕೊರತೆ<br>3) ಮಾಹಿತಿ ಶಾಖೆ |
| 2 | ಜಿ. ಕೃಷ್ಣಪ್ಪ<br>ಪ್ರ.ದ.ಸ. | 1) ಸಿಬ್ಬಂದಿ ಶಾಖೆ<br>2) ಶಿಸ್ತು ಪ್ರಕರಣಗಳು<br>3) ವೇತನ ಬಿಲ್ ತಯಾರಿಸುವುದು<br>4) ಅಧೀನ ಕಛೇರಿಗಳ ಸಿಬ್ಬಂದಿ ಶಾಖೆಯ ಪ್ರಕರಣಗಳ ವಿಲೇವಾರಿ |
| 3 | ಎಸ್. ಬಸವರಾಜ್,<br>ಪ್ರ.ದ.ಸ. | 1) ರಾಷ್ಟ್ರೀಯ ಕುಟುಂಬ ನೆರವು ಯೋಜನೆ<br>2) ನೀರಾವರಿ ಶಾಖೆ<br>3) ಆಹಾರ ಮತ್ತು ನಾಗರೀಕ ಸರಬರಾಜು<br>4) ಆಶ್ರಯ<br>5) ವಿಫಲ ಬಾವಿ<br>6) ರೈತರ ವಿದರ್ಭ ಪ್ಯಾಕೇಜ್ |
| 4 | ಎನ್. ಕೃಷ್ಣಮೂರ್ತಿ,<br>ಪ್ರ.ದ.ಸ. | 1) ಚುನಾವಣೆ ವಿಷಯಗಳು<br>2) ಮುಜರಾಯಿ ಪ್ರಕರಣಗಳು<br>3) ಅನುವಂಶಿಕ ಕಾಯ್ದೆ ರದ್ದಿಯಾತಿ ಪ್ರಕರಣಗಳು<br>4) ಇನಾಂ ಪ್ರಕರಣಗಳು<br>5) ಪುರಸಭೆ<br>6) ಜೀತವಿಮುಕ್ತಿ |
| 5 | ಎಲ್.ಬಿ. ಚಂದ್ರಶೇಖರ್<br>ಪ್ರ.ದ.ಸ. | 1) ಭೂ ಸ್ವಾಧೀನ ಪ್ರಕರಣಗಳು<br>2) ಹಕ್ಕು ದಾಖಲೆ<br>3) ಅರಣ್ಯ ಪ್ರಕರಣಗಳು<br>4) ಅಭಿಲೇಖಾಲಯ<br>5) ನಕಲು ವಹಿ |
| 6 | ಟಿ. ಪರಮೇಶ್ವರ,<br>ದ್ವಿ.ದ.ಸ. | 1) ನ್ಯಾಯಾಂಗ ಶಾಖೆ<br>2) ಅಸ್ವಾಭಾವಿಕ ಮರಣ ಪ್ರಕರಣಗಳು<br>3) ಭೂಮಿ ಶಾಖೆ<br>4) ಪಿ.ಟಿ.ಸಿ.ಎಲ್. ಪ್ರಕರಣಗಳು<br>5) ಭೂ ಸುಧಾರಣೆ<br>6) ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದ ಕಾಮಗಾರಿಗಳು<br>7) 79ಎ & ಬಿ (ಭೂ ಸುಧಾರಣೆ)<br>8) ಇತರೆ ವಿಷಯ ವಹಿ<br>9) ಬರಗಾಲ ಕಾಮಗಾರಿಗಳು<br>10) ಮಾಹಿತಿ ಹಕ್ಕು ಅಧಿನಿಯಮದನ್ವಯ ದಾಖಲೆಗಳನ್ನು ಸಾರ್ವಜನಿಕರಿಗೆ ತೋರಿಸುವುದು. |
| 7 | ಶ್ರೀಮತಿ ಮಮತಾ<br>ಜಿ. ಶರ್ಮಾ, ದ್ವಿ.ದ.ಸ. | 1) ನೈಸರ್ಗಿಕ ವಿಕೋಪ<br>2) ಗ್ರಾಮಪಂಚಾಯ್ತಿಗಳು<br>3) ಹಕ್ಕು ದಾಖಲೆ (ಗಣಕೀಕರಣ)<br>4) ಆಮದು ಮತ್ತು ರವಾನೆ ಶಾಖೆ |

ಉಪವಿಭಾಗಾಧಿಕಾರಿ
ಸಾಗರ ಉಪವಿಭಾಗ, ಸಾಗರ

ಪಿ.ಆರ್. 1226

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

### ಅಮಲ್ಜಾರಿ ಅರ್ಜಿ ಸಂಖ್ಯೆ:66/2002–03

**ಡಿಕ್ರಿ ಹೋಲ್ಡರ್:** ವಿರುದ್ಧ **ತೀರ್ಪುಋಣಿ :**

ಪ್ರಧಾನ ವ್ಯವಸ್ಥಾಪಕರು
ಟೌನ್ ಕೋ–ಆಪರೇಟೀವ್
ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ

ಕೆ. ಸರೋಜಮ್ಮ
ಕೋಂ. ಡಿ. ಶ್ರೀನಿವಾಸಪ್ಪ
ಭುವನಹಳ್ಳಿ ಮಾನಂಗಿ ಅಂಚೆ, ಶಿರಾ ತಾಲ್ಲೂಕು

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ. 74456=00 ದಾವಾ ಶುಲ್ಕ ರೂ. 165=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 66/02–03 ಮೊಬಲಗು ರೂ. 167024=00 ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:14.3.07ಕ್ಕೆ ರೂ. 323241=00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:15.1.2007 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಜಿ. ಕೃಷ್ಣಯ್ಯ, ಬಿನ್ ಗೋವಿಂದಪ್ಪ, ಜ್ಯೋತಿನಗರ, ಶಿರಾ ಇವರಿಗೆ ನಿವೇಶನವನ್ನು ರೂ. 155000=00 (ರೂಪಾಯಿಗಳು–ಒಂದು ಲಕ್ಷದ ಐವತ್ತೈದು ಸಾವಿರ ಮಾತ್ರ)ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

### ಸ.ಸಂ.ಸ.ನಿ.33.ಎಬಿಎನ್:ಎಸ್.ಸಿ:26:2007–08, ದಿನಾಂಕ:24ನೇ ಜುಲೈ 2007

ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960 ರ ನಿಯಮ 38 (6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್, ಲಿ,ಶಿರಾ ಇವರಿಗೆ ತೀರ್ಪುಋಣಿಗಳಾದ ಕೆ. ಸರೋಜಮ್ಮ ಕೋಂ ಡಿ. ಶ್ರೀನಿವಾಸಪ್ಪ, ಭುವನಹಳ್ಳಿ, ಮಾನಂಗಿ ಅಂಚೆ ಶಿರಾ ತಾಲ್ಲೂಕು. ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:15.3.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ ದಾರರಾದ ಶ್ರೀ ಜಿ. ಕೃಷ್ಣಯ್ಯ, ಬಿನ್ ಗೋವಿಂದಪ್ಪ, ಜ್ಯೋತಿನಗರ ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಶ್ರೀ ಜಿ. ಕೃಷ್ಣಯ್ಯ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ,. 155000=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀಮತಿ ಕೆ. ಸರೋಜಮ್ಮ ಕೋಂ ಡಿ. ಶ್ರೀನಿವಾಸಪ್ಪ, ಭುವನಹಳ್ಳಿ ಶಿರಾ ತಾಲ್ಲೂಕು ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

### ಸ್ಥಿರಸ್ವತ್ತುಗಳ ವಿವರ

ಶಿರಾಟೌನ್ ಮಾರುತಿನಗರದ 2ನೇ ನಂಬರಿನ ಪೂರ್ವ ಪಶ್ಚಿಮ 40 ಅಡಿ ಉತ್ತರ ದಕ್ಷಿಣ 35 ಅಡಿ ಅಳತೆಯುಳ್ಳ ನಿವೇಶನ ಚೆಕ್ಕು ಬಂದಿ ಪೂರ್ವಕ್ಕೆ ಸ್ವಂತ ಸೈಟು, ಪಶ್ಚಿಮಕ್ಕೆ: ರಸ್ತೆ, ಉತ್ತರಕ್ಕೆ: ಪಾರ್ವತಮ್ಮನ ಸೈಟು ದಕ್ಷಿಣಕ್ಕೆ ರತ್ನಮ್ಮನ ಸೈಟು

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2007 ನೇ ಇಸವಿ ಜುಲೈ ತಿಂಗಳು 24 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ–ವಿಭಾಗ–, ಮಧುಗಿರಿ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢಿಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:66/2002–03**

**ಉಪಸ್ಥಿತರು : ಹೆಚ್.ಡಿ. ಶಿವಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ–ಉಪವಿಭಾಗ, ಮಧುಗಿರಿ

**ಡಿಕ್ರಿ ಹೋಲ್ಡರ್:** ಪ್ರಧಾನ ವ್ಯವಸ್ಥಾಪಕರು
ಟೌನ್ ಕೋ–ಆಪರೇಟೀವ್
ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ

**ವಿರುದ್ಧ**

**ತೀರ್ಪುಋಣಿ :** ಕೆ. ಸರೋಜಮ್ಮ
ಕೋಂ. ಡಿ. ಶ್ರೀನಿವಾಸಪ್ಪ
ಭುವನಹಳ್ಳಿ ಮಾನಂಗಿ ಅಂಚೆ, ಶಿರಾ ತಾಲ್ಲೂಕು

ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ದಿನಾಂಕ:26.3.1997 ರಂದು ಪಡೆದ ಡಿಕ್ರಿ ನಂ 896/96–97ರ ಪ್ರಕಾರ ದಿನಾಂಕ:6.5.2002ರಂದು ಸಿ.ಇ.ಪಿ.ನಂ. 66/02–03ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀಮತಿ ಕೆ. ಸರೋಜಮ್ಮ ಕೋಂ ಡಿ. ಶ್ರೀನಿವಾಸಪ್ಪ, ಭುವನಹಳ್ಳಿ, ಮಾನಂಗಿ ಅಂಚೆ ಶಿರಾ ತಾಲ್ಲೂಕು. ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:15.3.2007 ರಂದು ಟೌನ್ ಕೋ–ಆಟರೇಟಿವ್ ಬ್ಯಾಂಕ್ ಲಿ. ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀ ಜಿ. ಕೃಷ್ಣಯ್ಯ ಬಿನ್ ಶ್ರೀ ಗೋವಿಂದಪ್ಪ ಜ್ಯೋತಿ ನಗರ, ಶಿರಾ (ತಾ), ತುಮಕೂರು ಜಿಲ್ಲೆ ಇವರು ರೂ, 1,55,000=00 (ಒಂದು ಲಕ್ಷದ ಐವತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀ ಜಿ. ಕೃಷ್ಣಯ್ಯ ಬಿನ್ ಗೋವಿಂದಪ್ಪ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ.ಸಂ | ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹೆ | ಖಾವೇಷು ಮಾರಿ ನಂ | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1 | ಮಾರುತಿ ನಗರ ಶಿರಾ ಟೌನ್ | ನಿವೇಶನ | ನಂ.2 | ಕೆ. ಸರೋಜಮ್ಮ ಕೋಂ ಡಿ. ಶ್ರೀನಿವಾಸಪ್ಪ ಭುವನಹಳ್ಳಿ ಶಿರಾ ತಾಲ್ಲೂಕು | 40x35 ಅಡಿಗಳು | ಪೂರ್ವಕ್ಕೆ:ಸ್ವಂತ ಸೈಟು ಪಶ್ಚಿಮಕ್ಕೆ: ರಸ್ತೆ ಉತ್ತರಕ್ಕೆ: ಪಾರ್ವತಮ್ಮನ ಸೈಟು ದಕ್ಷಿಣಕ್ಕೆ: ರತ್ನಮ್ಮನ ಸೈಟು |

ಮಾರಾಟದ ಮೊತ್ತ ರೂ. 1,55,000=00

ಮಾರಾಟದ ದಿನಾಂಕ: 15.3.2007

ನಿಗದಿತ ಮುದ್ರಾಂಕ ಶುಲ್ಕ ರೂ. 13,020=00

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 24–7–2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ–ವಿಭಾಗ–, ಮಧುಗಿರಿ

ಪಿ.ಆರ್. 1000

ಸಹಕಾರ ಇಲಾಖೆ

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

ಅಮಲ್ಜಾರಿ ಅರ್ಜಿ ಸಂಖ್ಯೆ:67/2002–03

| ಡಿಕ್ರಿ ಹೋಲ್ಡರ್: | ವಿರುದ್ಧ | ತೀರ್ಪುಋಣಿ : |
|---|---|---|
| ಪ್ರಧಾನ ವ್ಯವಸ್ಥಾಪಕರು | | ಮಹಮದ್ ಇಲಿಯಾಜ್ ಉರುಫ್ |
| ಟೌನ್ ಕೋ–ಆಪರೇಟೀವ್ | | ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್ |
| ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ | | ಖರಾದಿ ಮೊಹಲ್ಲಾ ಶಿರಾ |

ಪ್ರಸ್ತಾವನೆ:

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ. 42841=00 ದಾವಾ ಶುಲ್ಕ ರೂ. 165=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 67/02–03 ಮೊಬಲಗು ರೂ. 96346=00 ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:14.3.07ಕ್ಕೆ ರೂ. 182990=00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:15.3.2007 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಜಿ. ಕೃಷ್ಣಯ್ಯ, ಬಿನ್ ಗೋವಿಂದಪ್ಪ, ಜ್ಯೋತಿನಗರ, ಶಿರಾ ಇವರಿಗೆ ನಿವೇಶನವನ್ನು ರೂ. 65000=00 (ರೂಪಾಯಿಗಳು–ಆರವತ್ತೈದು ಸಾವಿರ ಮಾತ್ರ)ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜು 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

ಆದೇಶ

ಸ.ಸಂ.ಸ.ನಿ.33.ಎಬಿಎನ್:ಎಸ್.ಸಿ:27:2007–08, ದಿನಾಂಕ:24ನೇ ಜುಲೈ 2007

ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960 ರ ನಿಯಮ 38 (6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್, ಲಿ,ಶಿರಾ ಇವರಿಗೆ ತೀರ್ಪುಋಣಿಗಳಾದ ಮಹಮದ್ ಇಲಿಯಾಜ್ ಉರುಫ್ ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್ ಖರಾದಿ ಮೊಹಲ್ಲ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:15.3.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಜಿ. ಕೃಷ್ಣಯ್ಯ, ಬಿನ್ ಗೋವಿಂದಪ್ಪ, ಜ್ಯೋತಿನಗರ ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಶ್ರೀ ಜಿ. ಕೃಷ್ಣಯ್ಯ, ಬಿನ್ ಗೋವಿಂದಪ್ಪ, ಜ್ಯೋತಿನಗರ ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ,. 65000=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಮಹಮದ್ ಇಲಿಯಾಜ್ ಉರುಫ್ ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

ಸ್ಥಿರಸ್ವತ್ತುಗಳ ವಿವರ

ಶಿರಾಟೌನ್ ಮಾರುತಿನಗರದ ಅಸೆಸ್‌ಮೆಂಟ್ ನಂ. 10489 ನಿವೇಶನದ ನಂ 20 ಅಳತೆ ಪೂರ್ವ ಪಶ್ಚಿಮ 40 ಅಡಿ ಉತ್ತರ ದಕ್ಷಿಣ 31 ಅಡಿ ವಿಸ್ತೀರ್ಣದ ನಿವೇಶನಕ್ಕೆ ಚೆಕ್ಕು ಬಂದಿ ಪೂರ್ವಕ್ಕೆ ಸ್ವಂತ ಸೈಟು, ಪಶ್ಚಿಮಕ್ಕೆ: ರಸ್ತೆ, ಉತ್ತರಕ್ಕೆ: ರವಿಕುಮಾರ್ ಸೈಟು ದಕ್ಷಿಣಕ್ಕೆ ಆರ್ ರತ್ನಮ್ಮನವರ

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2007 ನೇ ಇಸವಿ ಜುಲೈ ತಿಂಗಳು 24 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ-ವಿಭಾಗ-, ಮಧುಗಿರಿ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ-ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ ಅಮಲ್ಜಾರಿ ಅರ್ಜಿ ಸಂಖ್ಯೆ:67/2002-03**

**ಉಪಸ್ಥಿತರು : ಹೆಚ್.ಡಿ. ಶಿವಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ-ಉಪವಿಭಾಗ, ಮಧುಗಿರಿ

**ಡಿಕ್ರಿ ಹೋಲ್ಡರ್:** ವಿರುದ್ಧ **ತೀರ್ಪುಋಣಿ :**

ಪ್ರಧಾನ ವ್ಯವಸ್ಥಾಪಕರು
ಟೌನ್ ಕೋ-ಆಪರೇಟೀವ್
ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ

ಮಹಮದ್ ಇಲಿಯಾಜ್ ಉರುಫ್
ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್
ಖರಾದಿ ಮೊಹಲ್ಲ ಶಿರಾ

ಟೌನ್ ಕೋ-ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ದಿನಾಂಕ:26.3.1997 ರಂದು ಪಡೆದ ಡಿಕ್ರಿ ನಂ 897/96-97ರ ಪ್ರಕಾರ ದಿನಾಂಕ:6.5.2002ರಂದು ಸಿ.ಇ.ಪಿ.ನಂ. 67/02-03ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಮಹಮದ್ ಇಲಿಯಾಜ್ ಉರುಫ್ ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್ ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:15.3.2007 ರಂದು ಟೌನ್ ಕೋ-ಆಟರೇಟಿವ್ ಬ್ಯಾಂಕ್ ಲಿ. ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀ ಜಿ. ಕೃಷ್ಣಯ್ಯ ಬಿನ್ ಶ್ರೀ ಗೋವಿಂದಪ್ಪ ಜ್ಯೋತಿ ನಗರ, ಶಿರಾ, ಇವರು ರೂ. 65,000=00 (ಆರವತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀ ಜಿ. ಕೃಷ್ಣಯ್ಯ ಬಿನ್ ಗೋವಿಂದಪ್ಪ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ.ಸಂ | ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹೆ | ಖಾವೇಷು ಮಾರಿ ನಂ | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1 | ಮಾರುತಿ ನಗರ ಶಿರಾ ಟೌನ್ | ನಿವೇಶನ ನಂ 20 | 10489 | ಮಹಮದ್ ಇಲಿಯಾಜ್ ಉರುಫ್ ಎಂ.ಡಿ. ಇಲಿಯಾಜ್, ಬಿನ್ ಮಹಮದ್ ಹುಸಿಲಿನ್ ಖರಾದಿ ಮೊಹಲ್ಲ ಶಿರಾ | 40x31 ಅಡಿಗಳು | ಪೂರ್ವಕ್ಕೆ:ಸ್ವಂತ ಸೈಟು ಪಶ್ಚಿಮಕ್ಕೆ: ರಸ್ತೆ ಉತ್ತರಕ್ಕೆ: ರವಿಕುಮಾರ್ ಸೈಟು ದಕ್ಷಿಣಕ್ಕೆ: ಆರ್ ರತ್ನಮ್ಮನ ಸೈಟು |

ಮಾರಾಟದ ಮೊತ್ತ ರೂ. 65,000=00
ಮಾರಾಟದ ದಿನಾಂಕ: 15.3.2007
ನಿಗದಿತ ಮುದ್ರಾಂಕ ಶುಲ್ಕ ರೂ. 5460=00

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 24-7-2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಪಿ.ಆರ್. 1001 ಮಧುಗಿರಿ ಉಪ-ವಿಭಾಗ-, ಮಧುಗಿರಿ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

**ಅಮಲ್ಜಾರಿ ಅರ್ಜಿ ಸಂಖ್ಯೆ: 36/2006–07**

| ಡಿಕ್ರಿ ಹೋಲ್ಡರ್: | ವಿರುದ್ಧ | ತೀರ್ಪುಋಣಿ : |
|---|---|---|
| ಪ್ರಧಾನ ವ್ಯವಸ್ಥಾಪಕರು<br>ಟೌನ್ ಕೋ–ಆಪರೇಟೀವ್<br>ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ | | ಭೀಮಣ್ಣ ಬಿನ್ ಹನುಮಣ್ಣ<br>ಬನ್ನಿ ನಗರ ಶಿರಾ ಟೌನ್ |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ. 70813=00 ದಾವಾ ಶುಲ್ಕ ರೂ. 1120=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ, ಬ್ಯಾಂಕುಗಳ ಮಹಾಮಂಡಳ ನಿಯಮಿತ ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 36/06–07 ಮೊಬಲಗು ರೂ. 77602=00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:13.3.07ಕ್ಕೆ ರೂ. 79659=00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:14.3.2007 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ಎಸ್.ವಿ. ಸುಮಿತ್ರ, ಕೋಂ ರಂಗರಾಜು, ಜ್ಯೋತಿನಗರ, ಶಿರಾ ಇವರಿಗೆ ನಿವೇಶನವನ್ನು ರೂ. 100000=00 (ರೂಪಾಯಿಗಳು–ಒಂದು ಲಕ್ಷ ಮಾತ್ರ)ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

## ಆದೇಶ

**ಸ.ಸಂ.ಸ.ನಿ.33.ಎಬಿಎನ್:ಎಸ್.ಸಿ:29:2007–08, ದಿನಾಂಕ:24ನೇ ಜುಲೈ 2007**

ಹೆಚ್. ಡಿ ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960 ರ ನಿಯಮ 38 (6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್, ಲಿ,ಶಿರಾ ಇವರಿಗೆ ತೀರ್ಪುಋಣಿಗಳಾದ ಭೀಮಣ್ಣ ಬಿನ್ ಹನುಮಣ್ಣ ಬನ್ನಿ ನಗರ ಶಿರಾ ಟೌನ್ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:14.3.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಎಸ್.ವಿ. ಸುಮಿತ್ರ, ಕೋಂ ರಂಗರಾಜು, ಜ್ಯೋತಿನಗರ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಶ್ರೀಮತಿ ಎಸ್.ವಿ. ಸುಮಿತ್ರ, ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ,. 100000=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಭೀಮಣ್ಣ ಬಿನ್ ಹನುಮಣ್ಣ ಬನ್ನಿನಗರ ಶಿರಾ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

## ಸ್ಥಿರಸ್ವತ್ತುಗಳ ವಿವರ

ಶಿರಾಟೌನ್ ಬನ್ನಿ ನಗರದಲ್ಲಿರುವ ಕೆಂಪು ಹೆಂಚಿನ ಮನೆ ಅಸೆಸ್‌ಮೆಂಟ್ ನಂ: 1321/1258/1243 ವಿಸ್ತೀರ್ಣ 17 x53 ಅಡಿಗಳು ಚೆಕ್ಕುಬಂದಿ ಪೂರ್ವಕ್ಕೆ ಪುರಸಭಾ ರಸ್ತೆ, ಪಶ್ಚಿಮಕ್ಕೆ ಕರೆ ಹನುಮಂತಯ್ಯನ ಮನೆ, ಉತ್ತರಕ್ಕೆ ಕಾಮಣ್ಣನವರ ಮನೆ, ದಕ್ಷಿಣಕ್ಕೆ ಲೆಂಕಪ್ಪನವರ ಮನೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2007 ನೇ ಇಸವಿ ಜುಲೈ ತಿಂಗಳು 24 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ-ವಿಭಾಗ-, ಮಧುಗಿರಿ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ-ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**
**ಅಮಲ್ಜಾರಿ ಅರ್ಜಿ ಸಂಖ್ಯೆ:36/2006-07**

**ಡಿಕ್ರಿ ಹೋಲ್ಡರ್:** **ವಿರುದ್ಧ** **ತೀರ್ಪುಋಣಿ :**

ಪ್ರಧಾನ ವ್ಯವಸ್ಥಾಪಕರು
ಟೌನ್ ಕೋ-ಆಪರೇಟೀವ್
ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ

ಭೀಮಣ್ಣ ಬಿನ್ ಹನುಮಣ್ಣ
ಬನ್ನಿ ನಗರ ಶಿರಾ ಟೌನ್

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ-ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ದಿನಾಂಕ:20.7.2006 ರಂದು ಪಡೆದ ಡಿಕ್ರಿ ನಂ ಜೆಆರ್ ಡಿ:ಯುಬಿ.ಎಫ್/1293/2006-07ರ ಪ್ರಕಾರ ದಿನಾಂಕ:8.1.2007ರಂದು ಸಿ.ಇ.ಪಿ.ನಂ. 36/06-07 ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಭೀಮಣ್ಣ ಬಿನ್ ಹನುಮಣ್ಣ ಬನ್ನಿ ನಗರ ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:14.3.2007 ರಂದು ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ. ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ಎಸ್.ವಿ. ಸುಮಿತ್ರ, ಕೋಂ ರಂಗರಾಜು, ಜ್ಯೋತಿನಗರ, ಶಿರಾ ತುಮಕೂರು ಜಿಲ್ಲೆ, ಇವರು ರೂ, 100000=00 (ಒಂದು ಲಕ್ಷ ರೂಪಾಯಿಗಳು ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಎಸ್.ವಿ. ಸುಮಿತ್ರ, ಕೋಂ ರಂಗರಾಜು, ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ.ಸಂ | ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹೆ | ಖಾವೇಷು ಮಾರಿ ನಂ | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1 | ಬನ್ನಿ ನಗರ ಶಿರಾ ಟೌನ್ | ಕೆಂಪು ಹೆಂಚಿನ ಮನೆ | 1321:1258 1243 | ಭೀಮಣ್ಣ ಬಿನ್ ಹನುಮಣ್ಣ ಬನ್ನಿ ನಗರ ಶಿರಾ | 17x53 ಅಡಿಗಳು | ಪೂರ್ವಕ್ಕೆ: ಪುರಸಭಾ ರಸ್ತೆ ಪಶ್ಚಿಮಕ್ಕೆ: ಕೆರೆ ಹನುಮಂತಯ್ಯನವರಮನೆ ಉತ್ತರಕ್ಕೆ: ಕಾಮಣ್ಣನವರ ಮನೆ ದಕ್ಷಿಣಕ್ಕೆ: ಲೆಂಕಪ್ಪನವರ ಮನೆ |

ಮಾರಾಟದ ಮೊತ್ತ ರೂ. 100000=00
ಮಾರಾಟದ ದಿನಾಂಕ: 14.3.2007
ನಿಗದಿತ ಮುದ್ರಾಂಕ ಶುಲ್ಕ ರೂ. 8400=00

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 24-7-2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ ಉಪ-ವಿಭಾಗ-, ಮಧುಗಿರಿ

ಪಿ.ಆರ್. 1002

ಸಂಚಾರಿ ದಳ, ಶಿಕಾರಿಪುರ ಇವರು ಇಲಾಖಾ ಪರ ಜಪ್ತಿಮಾಡಿ, ಈ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಆದರೆ ವಾಹನ ಮಾಲೀಕರು ಮತ್ತು ಇವರ ವಕೀಲರು ಈ ಘಟನೆ ನಡೆದ ಬಳಿಕ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶವಿರುವುದಿಲ್ಲ. ಈ ವಾಹನದಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಿರುವುದು ಪ್ರಾಸಿಕ್ಯೂಷನ್ ಸಾಕ್ಷಿಯ ಹೇಳಿಕೆಯಿಂದ ಸಾಬೀತಾಗಿರುತ್ತದೆ. ಆದ್ದರಿಂದ ವಾಹನವನ್ನು ಬೀಟೆ ನಾಟಾದ ಸಮೇತ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರು ಮಾರುತಿ ಓಮ್ನಿ ನಂ:ಕೆಎ–25–ಎಂ–7435ರಲ್ಲಿ ಬೀಟೆ ನಾಟಾ 38=0.122ಎಂ3 ನ್ನು ದಿ:12–11–2004ರಂದು ಕಾನೂನಿನ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಮಾರುತಿ ಓಮ್ನಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ, ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇಯ ಅಂಶಕ್ಕೆ ಹೌದು ಎಂತಲೂ

2. ಎರಡನೇಯ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

**ಅಂಶ–1**

ದಿ:12.11.2004ರಂದು ಶಿಕಾರಿಪುರ ತಾಲ್ಲೂಕು ಕಸಬಾ ಹೋಬಳಿ ಶಿಕಾರಿಪುರದಿಂದ ಮಾಸೂರಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯಲ್ಲಿ ಶಿಕಾರಿಪುರ ವಲಯದ ಸಿಬ್ಬಂದಿ ಹಾಗೂ ಸಂಚಾರಿ ದಳದ ಸಿಬ್ಬಂದಿಯವರು ಗಸ್ತು ಮಾಡುತ್ತಿರುವಾಗ ಶಿಕಾರಿಪುರದಿಂದ ಮಾಸೂರು ಕಡೆ ಒಂದು ಬಿಳಿ ಮಾರುತಿ ಓಮ್ನಿ ಕೆಎ–25–ಎಂ–7435 ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸದೇ ಮಾಸೂರು ಕಡೆ ವೇಗವಾಗಿ ಚಲಿಸಿದ್ದರಿಂದ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಬೀಟೆ ನಾಟಾವನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಬೀಟೆ ನಾಟಾ, ವಾಹನ ಮತ್ತು ಆರೋಪಿಯನ್ನು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ ಹಾಗೂ ಮಹಜರ್ ಕ್ರಮದೊಂದಿಗೆ ಜಪ್ತಿಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50ಕೆ, 62, 104(ಎ) 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165 ಮತ್ತು ಐಪಿಸಿ 379ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ::80/04–05ನ್ನು ದಾಖಲಿಸಿ ಆರೋಪಿಗಳನ್ನು ಜೆಎಂಎಫ್‌ಸಿಗೆ ಒಪ್ಪಿಸಿ ವಾಹನ, ಬೀಟೆ ನಾಟಾವನ್ನು ದಾಖಲೆಗಳೊಂದಿಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಈ ದಾಖಲೆಗಳಿಂದ ಮೇಲ್ನೋಟಕ್ಕೆ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಬೀಟೆ ನಾಟಾ ಕಳ್ಳಸಾಗಾಣಿಕೆಗೆ ಈ ವಾಹನವನ್ನು ಉಪಯೋಗಿಸಿರುವುದು ಸಾಬೀತಾಗಿದೆ. ಆದ್ದರಿಂದ ಈ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–2**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಮಾರುತಿ ಓಮ್ನಿ ಕೆಎ–25–ಎಂ–7435ರ ಬಗ್ಗೆ ಆರ್.ಸಿ. ಮಾಲೀಕರಾದ ಶ್ರೀ ಅನಂತ ಬಿನ್ ದತ್ತಾತ್ರೇಯ ಜಾನು ಹಾಲಿ ಶಿರಸಿ ವಾಸಿ ಇವರ ಜಿಪಿಎದಾರರಾದ ಶ್ರೀ ಪುಟ್ಟಪ್ಪ ಬಿನ್ ನಾಗಪ್ಪ,

(ನಾಗೇಶ ಬಜಂತ್ರಿ) ನಿವೃತ್ತ ನೌಕರ, ಶಿರಾಳಕೊಪ್ಪ ಶಿಕಾರಿಪುರ ತಾಲ್ಲೂಕು ಇವರು ಹಕ್ಕುಬಾಧ್ಯತೆಯ ಮನವಿಯನ್ನು ದಿ:22.3.2005 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಸಲ್ಲಿಸಿ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಹಾಗೂ ದಿ:8-3-2005ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ಜಾರಿಮಾಡಿದೆ. ಹಾಗೂ ಇವರ ಕೋರಿಕೆಯನ್ನು ದಿ:27-4-2005 ರಂದು ತಿರಸ್ಕರಿಸಿ ಆದೇಶ ಹೊರಡಿಸಲಾಗಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಅಪೀಲ್ ನಂ:22/05ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಈ ಅಪೀಲಿನ ದಿ:21-7-2005ರ ಆದೇಶದಲ್ಲಿ 4 ಷರತ್ತುಗಳನ್ನು ವಿಧಿಸಿ ಖಾಲಿ ವಾಹನವನ್ನು ಮಧ್ಯಂತರ ಅವಧಿಗೆ ವಾಹನ ಮಾಲೀಕರಿಗೆ ಬಿಡುಗಡೆ ಮಾಡಲು ಆದೇಶವಾಗಿದೆ. ಮಾನ್ಯ ಜಿಲ್ಲಾ ನ್ಯಾಯಾಲಯದ ಆದೇಶವನ್ನು ವಾಹನ ಮಾಲೀಕರು ಪಾಲಿಸಿರುವುದಿಲ್ಲ. ಹಾಗೂ ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:21-10-06 ರಿಂದ 30-6-2007ರವರೆಗೆ 11 ಬಾರಿ ಅವಕಾಶ ನೀಡಲಾಗಿತ್ತು. ಆದರೆ ಹೇಳಿಕೆ ನೀಡಲು ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ಮತ್ತು ಡಿಫೆನ್ಸ್ ಕಡೆ ವಾದ ಮಂಡಿಸಲು ದಿ:28-7-2007, 4-8-2007ರಂದು ಅವಕಾಶ ನೀಡಿದ್ದು ದಿ:4-8-2007ರಂದು ವಾದ ಮಂಡಿಸಿರುತ್ತಾರೆ. ಆದ್ದರಿಂದ ಈ ಪ್ರಕರಣದಲ್ಲಿ ವಾಹನ ಮಾಲೀಕರಿಗೆ ಅವರ ಅಹವಾಲು ಮಂಡಿಸಲು ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರ.

**ಅಂಶ-3**

ದಿ:12-11-2004ರಂದು ಶಿಕಾರಿಪುರ ತಾಲ್ಲೂಕು ಕಸಬಾ ಹೋಬಳಿ ಶಿಕಾರಿಪುರದಿಂದ ಮಾಸೂರಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯಲ್ಲಿ ಶಿಕಾರಿಪುರ ವಲಯದ ಸಿಬ್ಬಂದಿ ಹಾಗೂ ಸಂಚಾರಿ ದಳದ ಸಿಬ್ಬಂದಿಯವರು ಗಸ್ತು ಮಾಡುತ್ತಿರುವಾಗ ಶಿಕಾರಿಪುರದಿಂದ ಮಾಸೂರು ಕಡೆ ಒಂದು ಬಿಳಿ ಮಾರುತಿ ಓಮ್ನಿ ಕೆಎ-25-ಎಂ-7435 ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸದೇ ಮಾಸೂರು ಕಡೆ ವೇಗವಾಗಿ ಚಲಿಸಿದ್ದರಿಂದ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಬೀಟೆ ನಾಟಾವನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಬೀಟೆ, ನಾಟಾ ವಾಹನ ಮತ್ತು ಆರೋಪಿಯನ್ನು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ ಹಾಗೂ ಮಹಜರ್ ಕ್ರಮದೊಂದಿಗೆ ಜಪ್ತಿ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50ಕೆ, 62, 104(ಎ) 71(ಎ), ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165 ಮತ್ತು ಐಪಿಸಿ 379ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ:80/04-05ನ್ನು ದಾಖಲಿಸಿ ಆರೋಪಿಗಳನ್ನು ಜೆಎಂಎಫ್‌ಸಿಗೆ ಒಪ್ಪಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿಯ ಹೇಳಿಕೆಗೂ, ಸಲ್ಲಿಸಿದ ದಾಖಲೆಗಳಿಗೂ ಒಂದಕ್ಕೊಂದು ಹೋಲಿಕೆಯಾಗಿದ್ದು, ಯಾವುದೇ ರೀತಿಯ ವ್ಯತಿರಿಕ್ತ ಹೇಳಿಕೆ ಹೇಳಿರುವುದಿಲ್ಲ. ಅಲ್ಲದೆ ಡಿಫೆನ್ಸ್ ಸಾಕ್ಷಿಯು ಈ ನ್ಯಾಯಾಲಯಕ್ಕೆ ದಿ:22-3-2005 ರಂದು ಮನವಿ ಸಲ್ಲಿಸುವಾಗ ಹಕ್ಕು ಬಾಧ್ಯತೆ ಅರ್ಜಿಯಲ್ಲಿ ಈ ವಾಹನವನ್ನು ಲೋನ್ ಮೂಲಕ ಖರೀದಿಸಿದ್ದೆಂದು, ಲೋನ್ ತೀರಿಸಲು ಬಾಕಿ ಇದೆಯೆಂದು, ಈ ವಾಹನವನ್ನು ಯಾವುದೇ ರೀತಿಯ ಕಳ್ಳ ಸಾಗಾಣಿಕೆಗೆ ಬಳಸದಂತೆ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡಿರುತ್ತಾರೆಂದು ಮತ್ತು ಇವರು ಈ ಕೃತ್ಯದಲ್ಲಿ ಭಾಗಿಯಾಗಿಲ್ಲವೆಂದು, ಇವರು ಮುಗ್ಧರೆಂದು, ಈ ಬಗ್ಗೆ ಈ ವಾಹನದ ವಿಚಾರಣಾ ಕಾಲದಲ್ಲಿ ಯಾವುದೇ ಸಾಕ್ಷ್ಯಾಧಾರಗಳನ್ನು ಡಿಫೆನ್ಸ್ ಕಡೆಯವರು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ ಆದ್ದರಿಂದ ಈ ಪ್ರಶ್ನೆಯ ಮೊದಲ ಭಾಗಕ್ಕೆ ಹೌದು ಎಂದೂ, ಎರಡನೇ ಭಾಗಕ್ಕೆ ಇಲ್ಲ ಎಂದು ನನ್ನ ಉತ್ತರವಾಗಿದೆ.

**ಅಂಶ-4**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ಓಮ್ನಿ ಕೆಎ-25-ಎಂ-7435ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 38=0.122ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:1-9-2007ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ

ಪಿ.ಆರ್. 1219